# ಪಾನಸಿ

ತಿಂಗಳ ಪತ್ರಿಕೆ

ಏಪ್ರಿಲ್ : 2000

- ಮೀಸಲಾತಿ : ಒಂದು ಅಧ್ಯಯನ
- ದಲಿತ ಸ್ತ್ರೀ ಲೋಕ
- ಶ್ರೀಮತಿ ಸಿದ್ಧಾರ್ಥಳ ಪ್ರಶ್ನೆಗಳು
- ಕೊಲೆಯಾದ ಪ್ರಮೀಳ

# ಮಾನಸ

ತಿಂಗಳ ಪತ್ರಿಕೆ

ಸಂಪುಟ : 15 ಸಂಚಿಕೆ : 3

ಏಪ್ರಿಲ್ : 2000



ವಿಳಾಸ

"ಮಾನಸ" ತಿಂಗಳ ಪತ್ರಿಕೆ

ಪಂಚಾಯಿತಿ ರಸ್ತೆ

ಕಾಡುಗೋಡಿ ಪೋಸ್ಟ್

ಬೆಂಗಳೂರು - 560 067

ಸೂಚನೆ : ಬಿಡಿ ಪ್ರತಿ **3-00** ರೂ.

ವಾರ್ಷಿಕ ಚಂದಾ **40-00** ರೂ.

ಒಂದು ವಿಶೇಷ ಸಂಚಿಕೆಯೊಂದಿಗೆ

ಒಟ್ಟು ಹನ್ನೊಂದು ಸಂಚಿಕೆಗಳು

## *ಈ ಸಂಚಿಕೆಯಲ್ಲಿ......*





ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ

ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು - ೫೬೦ ೦೬೭

# ಸಂಪಾದಕೀಯ



ಕೇಂದ್ರ ಸರ್ಕಾರ ಹಾಗೂ ರಾಜ್ಯ ಸರ್ಕಾರ ಮಂಡಿಸಿರುವ ಬಜೆಟ್‌ನ ಬಿಸಿ ಈಗಾಗಲೇ ಜನಸಾಮಾನ್ಯರಿಗೆ ತಟ್ಟಿದೆ. ಈ ಎರಡು ಬಜೆಟ್‌ಗಳು ಹಾಗೂ ಜೀವನಾವಶ್ಯಕ ವಸ್ತುಗಳ ಬೆಲೆ ಏರಿಕೆ ಜನಸಾಮಾನ್ಯ ಮೂಲಭೂತ ಹಕ್ಕಿನ ಚ್ಯುತಿಯಾಗಿದೆ.

ಪಡಿತರ ವ್ಯವಸ್ಥೆಯಲ್ಲಿ ನೀಡುವ ಅಕ್ಕಿ, ಗೋಧಿ, ಸಕ್ಕರೆ, ಸೀಮೆಎಣ್ಣೆ, ಗ್ಯಾಸ್‌ನ ಬೆಲೆಯನ್ನು ಏರಿಸಿದ್ದು ಹಸಿದ ಜನರ ಹೊಟ್ಟೆಯ ಮೇಲೆ ತಣ್ಣೀರಿನ ಬಟ್ಟೆಯನ್ನು ಹಾಕಿಕೊಳ್ಳುವಂತೆ ಮಾಡಿದೆ. ಜೀವನಾವಶ್ಯಕ ವಸ್ತುಗಳ ಬೆಲೆಯನ್ನ ಏರಿಸಿರುವುದು ಕುಟುಂಬದ ಬಜೆಟ್ ನಿರ್ವಹಣೆಯಲ್ಲಿ ಅಮಾನುಷವಾದ ಪರಿಣಾಮವನ್ನು ಬೀರುತ್ತದೆ. ಜೀವನಾವಶ್ಯಕ ವಸ್ತುಗಳ ಬೆಲೆ ಏರಿಕೆಯ ಬಿಸಿ ನೇರವಾಗಿ ಮುಟ್ಟುವುದು ಮಹಿಳೆಯರನ್ನು. ಕುಟುಂಬ ನಿರ್ವಹಣೆಯ ಹೊಣೆ ಸಂಪೂರ್ಣವಾಗಿ ಮಹಿಳೆಯರ ಮೇಲಿರುವುದರಿಂದ, ಮಹಿಳೆಯರು ಈ ಬೆಲೆ ಏರಿಕೆಯ ಹೊರೆಯನ್ನು ಹೊರಲು ತಮ್ಮದೇ ದಾರಿಯನ್ನು ಕಂಡುಕೊಳ್ಳುತ್ತಾರೆ. ದುಡಿಯುವ ವರ್ಗದ, ಕೃಷಿ, ಕಾರ್ಮಿಕ ಮಹಿಳೆಯರು, ತಮ್ಮ ಹಾಗೂ ಮಕ್ಕಳ ಬೇಡಿಕೆಗಳನ್ನು ಕಡಿತಗೊಳಿಸುವುದರ ಮೂಲಕ ಈ ಹೊರೆಯನ್ನು ಹೊರುವುದು ಅನಿವಾರ್ಯವಾಗುತ್ತದೆ. ಆಹಾರ ಪದಾರ್ಥಗಳನ್ನು ಕೊಳ್ಳುವುದರಲ್ಲಿ, ಬಳಸುವುದರಲ್ಲಿ ಕಡಿವಾಣವನ್ನು ಹಾಕಬೇಕಾಗುತ್ತದೆ. ಎಲ್ಲರಿಗೂ ಊಟ ಬಡಿಸಿದ ಮೇಲೆ, ತಾನುಣ್ಣುವ ಮಹಿಳೆ ಒಂದು ಪಕ್ಷ ತನಗೆ ಕಡಿಮೆ ಇದ್ದರೂ, ಇಲ್ಲದೆ ಇದ್ದರೂ, ಸಹಿಸಿಕೊಳ್ಳುವುದು ಅನಿವಾರ್ಯವಾಗುತ್ತದೆ. ಈಗಿರುವ ಪಿತೃಪ್ರಧಾನ ಸಾಂಸ್ಕೃತಿಕ ಕೌಟುಂಬಿಕ ರಚನೆಯಲ್ಲಿ ಈ ಹೊರೆಯನ್ನು ಮಹಿಳೆ ಹೆಚ್ಚಾಗಿ ತನ್ನ ಮೇಲೆ ಹಾಕಿಕೊಳ್ಳಬೇಕಾಗುತ್ತದೆ.

ಪಡಿತರ ವ್ಯವಸ್ಥೆಯಲ್ಲಿ ಅವ್ಯವಹಾರ, ಗುಣಮಟ್ಟ ಪದಾರ್ಥಗಳ ಕೊರತೆ, ಮುಂತಾದ ಸಮಸ್ಯೆಗಳು ಜನರನ್ನು ಕಾಡುತ್ತಿವೆ. ಪಡಿತರ ವ್ಯವಸ್ಥೆಯನ್ನೇ ನಂಬಿರುವ ಕುಟುಂಬಗಳು ಕಳಪೆ ದರ್ಜೆಯ ಪದಾರ್ಥಗಳನ್ನು ಹೆಚ್ಚು ಬೆಲೆಯನ್ನು ಕೊಟ್ಟು ಕೊಳ್ಳುವುದು ಅನಿವಾರ್ಯವಾಗಿದೆ. ಕಾಡಿನ ನಾಶ, ವಿದ್ಯುತ್ ಕೊರತೆಯಿಂದಾಗಿ ಮಹಿಳೆಯರು ಸೀಮೆಎಣ್ಣೆಯನ್ನೆ ಅವಲಂಬಿಸಬೇಕಾಗಿದೆ. ಜೀವನಾವಶ್ಯಕ ವಸ್ತುಗಳ ಬೆಲೆಯನ್ನು ಏರಿಸಿರುವ ಸರ್ಕಾರಗಳು ಯಾರ ಹಿತಾಸಕ್ತಿಯನ್ನು ರಕ್ಷಿಸುವುದರಲ್ಲಿ ಆಸಕ್ತವಾಗಿವೆ ಎಂಬುದನ್ನು ಎತ್ತಿ ತೋರಿಸುತ್ತದೆ.

ಬೆಲೆ ಏರಿಕೆಯಿಂದ ಮಹಿಳೆಯರ ಮೇಲೆ ಹೇರುವ ಹೊರೆಯನ್ನು ನಿರ್ಲಕ್ಷಿಸುವ ಸರ್ಕಾರಗಳು ಇನ್ನೊಂದು ಕಡೆ ಮಹಿಳೆಯರಿಗಾಗಿ ಹಲವಾರು ಯೋಜನೆಗಳನ್ನು ನೀಡುವುದರ ಮೂಲಕ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ತಮ್ಮ ದ್ವಿಮುಖ ನೀತಿಯನ್ನು ಪ್ರತಿಬಿಂಬಿಸುತ್ತಿವೆ.

●

# ಮೀಸಲಾತಿ : ಒಂದು ಅಧ್ಯಯನ

- ಮಾನಸ

**ಸ್ವಾತಂತ್ರ್ಯಪೂರ್ವ ಬ್ರಾಹ್ಮಣೇತರ ಚಳುವಳಿ :**

ಮೀಸಲಾತಿಗೆ ಸಂಬಂಧಿಸಿದಂತೆ ಕರ್ನಾಟಕದ ಚರಿತ್ರೆಯಲ್ಲಿ ಅನೇಕ ಕಮಿಟಿಗಳು, ಕಮಿಷನ್‌ಗಳು ಅಸ್ತಿತ್ವಕ್ಕೆ ಬಂದವಲ್ಲದೇ ಹಲವಾರು ಚಳುವಳಿಗಳೂ ಹುಟ್ಟಿಕೊಂಡಿವೆ. ಆದಾಗ್ಯೂ ಮೀಸಲಾತಿಯ ಹೋರಾಟದಲ್ಲಾಗಲೀ ಅಥವಾ ಕಮಿಷನ್ ಅಥವಾ ಕಮಿಟಿಗಳ ವರದಿಯಲ್ಲಾಗಲೀ ಮಹಿಳಾ ಮೀಸಲಾತಿಯ ಪ್ರಶ್ನೆಯಾಗಲೀ ಅಥವಾ ಚರ್ಚೆಯಾಗಲೀ ಕಾಣಿಸಿಕೊಳ್ಳದಿರುವುದು ವಿಪರ್ಯಾಸವಾಗಿದೆ. ಮೀಸಲಾತಿಗೆ ಸಂಬಂಧಿಸಿದಂತೆ ಮಹಿಳೆಯರ ಭಾಗವಹಿಸುವಿಕೆ ಅಥವಾ ಧ್ವನಿಯ ಬಗ್ಗೆ ಕರ್ನಾಟಕದಲ್ಲಿ ಯಾವುದೇ ಮಾಹಿತಿ ಕೂಡಾ ದೊರಕುವುದಿಲ್ಲ. ಮಹಿಳಾ ಚಳುವಳಿ ಪಿತೃ ಪ್ರಾಧಾನ್ಯತೆ ಹಾಗೂ ಬಂಡವಾಳಶಾಹಿ ವಿರುದ್ಧ ಎತ್ತುತ್ತಿರುವ ಪ್ರಶ್ನೆಯಿಂದಾಗಿ, ಹಾಗೂ ಒತ್ತಡದಿಂದಾಗಿ 20ನೆಯ ಶತಮಾನದಲ್ಲಿ ಮಹಿಳಾ ಮೀಸಲಾತಿಯು ಹೆಚ್ಚು ಮಹತ್ವವನ್ನು ಪಡೆದುಕೊಂಡಿತು. ಈ ದೆಸೆಯಿಂದಾಗಿ 1980ರ ಕೊನೆಯಲ್ಲಿ ಕರ್ನಾಟಕದಲ್ಲಿ 30% ಮೀಸಲಾತಿ ಸರ್ಕಾರಿ ಕೆಲಸಗಳಲ್ಲಿ ಹಾಗೂ 25% ಸ್ಥಳೀಯ ಪಂಚಾಯಿತಿಯಲ್ಲಿ ಮಹಿಳಾ ಮೀಸಲಾತಿ ದೊರಕಿತು.

ಜಾತಿ ಹಾಗೂ ಲಿಂಗಾಧಾರಿತ ಶೋಷಣೆಯ ವಿರುದ್ಧದ ಧ್ವನಿಗಳನ್ನು ಕರ್ನಾಟಕದಲ್ಲಿ ನಾವು 12ನೆಯ ಶತಮಾನದ ವಚನ ಚಳುವಳಿಯಲ್ಲಿಯೇ ಕಾಣಬಹುದಾಗಿದೆ. ಇದನ್ನು ಸಾಮಾನ್ಯವಾಗಿ ಭಕ್ತಿ ಪಂಥ ಎಂದು ಕರೆಯುತ್ತಾರೆ. ಆದಾಗ್ಯೂ ಜಾತಿ ಹಾಗೂ ಮಹಿಳಾ ಸಂಬಂಧಿತ ಪ್ರಶ್ನೆಗಳು ಈ ಸಂದರ್ಭದಲ್ಲಿ ಸಾಕಷ್ಟು ಚರ್ಚೆಗೆ ಒಳಗಾಗಿದ್ದವು. ಶಿಕ್ಷಣ ಹಾಗೂ ಆಡಳಿತಾತ್ಮಕ ಉದ್ಯೋಗಗಳಲ್ಲಿದ್ದ ಬ್ರಾಹ್ಮಣರ ಹಿಡಿತವನ್ನು 12ನೆಯ ಶತಮಾನದ ಉತ್ತಮ ಸ್ಥಿತಿಯಲ್ಲಿದ್ದ ಶೂದ್ರರು ವಿರೋಧಿಸುತ್ತಿದ್ದರು. ದೈವತ್ವ, ಸಾಹಿತ್ಯ, ವಚನಗಳಿಗೆ ಅತ್ಯಂತ ಹೆಚ್ಚು ಪ್ರಾಮುಖ್ಯತೆ ನೀಡಿದ್ದ ವಚನಕಾರರ ಚಳುವಳಿಯ ಚರಿತ್ರೆಯು ಸಾಮಾಜಿಕ ಉತ್ಪಾದನೆಯಲ್ಲಿ ಸ್ತ್ರೀಯರಿಗಿದ್ದ ಸ್ಥಿತಿ-ಗತಿಯ ಮೇಲೆ ಬೆಳಕು ಚೆಲ್ಲುವುದಿಲ್ಲ. 'ಉದ್ಯೋಗ'ದ ಕಲ್ಪನೆಯನ್ನು ಮರುವ್ಯಾಖ್ಯಾನಿಸುವಾಗ ವೈಚಾರಿಕ ಚೌಕಟ್ಟಿನಲ್ಲಿ ಮಹಿಳಾ ಪ್ರಶ್ನೆಯನ್ನು ಗಂಭೀರವಾಗಿ ತೆಗೆದುಕೊಂಡಿರುವುದು ಕಂಡುಬರುತ್ತದೆ. ವಚನ ಚಳುವಳಿಯಲ್ಲಿ ಭಾಗವಹಿಸಿ, ಮಹಿಳೆಯರ ಬಗೆಗಿನ ಪೂರ್ವಪೀಡಿತ ಭಾವನೆಗಳನ್ನು ವಿರೋಧಿಸಿ, ಮಹಿಳಾ ಸಮಾನತೆಯ ಬೇಡಿಕೆಯಿತ್ತ ಹಲವಾರು ಮಹಿಳೆಯರ ಬಗೆಗಿನ ಮಾಹಿತಿಗಳು ನಮಗೆ ವಚನ ಚಳುವಳಿಯ ಚರಿತ್ರೆಯಲ್ಲಿ ದೊರಕುತ್ತದೆ. ಸಾಮಾಜಿಕ ಉತ್ಪಾದನೆಯಲ್ಲಿ ಸಮಾನ ಅವಕಾಶಗಳಿಗಾಗಿ ಬೇಡಿಕೆಗಳು, ಧ್ವನಿಗಳು ಇದ್ದಾಗ್ಯೂ ಕೂಡಾ 12ನೆಯ ಶತಮಾನದ ನಂತರ ಜಾತಿ ಹಾಗೂ ಮಹಿಳೆಯರ ಬಗ್ಗೆಗಿನ ಧ್ವನಿಗಳು ನಂದಿಹೋಗಿದ್ದು ನಮಗೆ ಕಂಡುಬರುತ್ತದೆ.

ಟಿಪ್ಪು ಸುಲ್ತಾನನ ಅವನತಿಯ ನಂತರ ಮೈಸೂರು ರಾಜ್ಯದ ರಾಜರಾಗಿ ಒಡೆಯರ್‌ಗಳು ನೇಮಕಗೊಂಡರು. ಆ ಸಂದರ್ಭದಲ್ಲಿ ಪರೋಕ್ಷವಾಗಿ ಇಂಗ್ಲೀಷರು ಆಳ್ವಿಕೆ ನಡೆಸುತ್ತಿದ್ದುದರಿಂದ ಆಡಳಿತಾತ್ಮಕ ವ್ಯವಹಾರಗಳು ಇಂಗ್ಲೀಷ್‌ನಲ್ಲಿಯೇ ನಡೆಯುತ್ತಿದ್ದವು. ತಮಗಿದ್ದ ಇಂಗ್ಲೀಷಿನ ಸವಲತ್ತಿನಿಂದಾಗಿ ಮದ್ರಾಸಿನ ಬ್ರಾಹ್ಮಣರು ಮೈಸೂರಿನ ಆಡಳಿತಾತ್ಮಕ ವ್ಯವಹಾರಗಳಲ್ಲಿ ಪ್ರಧಾನ ಸ್ಥಾನ ಗಳಿಸಿದರು. ಮೈಸೂರಿನ ಬ್ರಾಹ್ಮಣರು ಆಡಳಿತಾತ್ಮಕ ಉದ್ಯೋಗಗಳಲ್ಲಿ ತಮಗೂ ಅವಕಾಶಗಳು ಬೇಕೆಂಬ ಬೇಡಿಕೆಗಳನ್ನಿತ್ತರು. ಈ ಬೇಡಿಕೆಗಳು ನಿರ್ಲಕ್ಷಿಸಲ್ಪಟ್ಟಾಗ, ಅಂದಿನ ಮಹಾರಾಜರಲ್ಲಿ ಉದ್ಯೋಗಕ್ಕೆ ತೆಗೆದುಕೊಳ್ಳುವಾಗ ಬರಿಯ 'ಪ್ರತಿಭೆ'ಗೆ ಮಾತ್ರ ಪ್ರಾಶಸ್ತ್ಯ ನೀಡಬಾರದು ಎಂಬ ಬೇಡಿಕೆಯನ್ನಿತ್ತರು.

ಅಂದಿನ ಮಹಾರಾಜ ಮೈಸೂರ ಬ್ರಾಹ್ಮಣರ ಬೇಡಿಕೆಗಳನ್ನು ಬೆಂಬಲಿಸಿದರು. ಅವರು ಸ್ಥಳೀಯ ಬ್ರಾಹ್ಮಣೇತರ ವರ್ಗಕ್ಕೆ ಸೇರಿದವರಾಗಿದ್ದರು. ಈ ಹಂತದಲ್ಲಿ ಲಿಂಗಾಯಿತರು ಹಾಗೂ ಒಕ್ಕಲಿಗರೂ ಸಹ ಒಗ್ಗೂಡುವಂತಾಯಿತು. ಟಿಪ್ಪು ಸುಲ್ತಾನನ ಸಾವಿನ ನಂತರ ಮುಸ್ಲಿಂರೆಲ್ಲರೂ ಒಗ್ಗೂಡಿ, ಬ್ರಾಹ್ಮಣರ ಪ್ರಭುತ್ವದ ವಿರುದ್ಧ ಒಕ್ಕಲಿಗರು ಹಾಗೂ ಲಿಂಗಾಯಿತರೊಟ್ಟಿಗೆ ತಮ್ಮ ಬೆಂಬಲ ಸೂಚಿಸಿದರು. ಈ ಮೂರೂ ಜಾತಿಗಳ ಸಮುದಾಯದವರು ಒಟ್ಟಿಗೇ ಸೇರಿ ಒಂದು ಬಲವಾದ ಸಂಘಟನೆಯನ್ನು ಸ್ಥಾಪಿಸಿದರು. ಇದು ಪ್ರಜಾ ಮಿತ್ರ ಮಂಡಳಿ ಎಂದು ಕರೆಯಲ್ಪಟ್ಟಿತು. ನಂತರ ಇದು ಪ್ರಜಾ ಸಂಯುಕ್ತ ಪಕ್ಷ ಎಂಬ ಹೆಸರಿನಲ್ಲಿ ಪ್ರಸಿದ್ಧವಾಯಿತು.

1909ರಲ್ಲಿ ಮೈಸೂರಿನಲ್ಲಿ ಪ್ರಥಮ ಲೆಜಿಸ್ಲೇಟಿವ್ ಕೌನ್ಸಿಲ್ ಅಸ್ತಿತ್ವಕ್ಕೆ ಬಂದಿತು. ಇದು ಹಿಂದುಳಿದ ವರ್ಗದವರ ಆಂದೋಲನಕ್ಕೆ

ಒಂದು ವೇದಿಕೆಯಾಯಿತು. 1918ರಲ್ಲಿ ಮಿಲ್ಲರ್ ಕಮಿಟಿಯು ಅಸ್ತಿತ್ವಕ್ಕೆ ಬಂದಿತು. ಈ ಕಮಿಟಿಯು ಸರ್ಕಾರಿ ಕೆಲಸಗಳಲ್ಲಿ ಎಲ್ಲಾ ಸಮುದಾಯದವರ ಮೀಸಲಾತಿಯನ್ನು ಬೆಂಬಲಿಸಿತು. ಆದರೆ ಬ್ರಾಹ್ಮಣ ಅಥವಾ ಕ್ರಿಶ್ಚಿಯನ್ ಸಮುದಾಯದವರಿಗೆ ಮಾತ್ರ ಈ ಮೀಸಲಾತಿಯ ಸವಲತ್ತನ್ನು ಬೆಂಬಲಿಸಲಿಲ್ಲ. ಬ್ರಾಹ್ಮಣ ನಾಯಕರು ಈ ಮೀಸಲಾತಿಯನ್ನು ವಿರೋಧಿಸಿದರು. ಹಾಗಾಗಿ ಈ ಮೀಸಲಾತಿಯು ಜಾರಿಗೆ ಬರಲಿಲ್ಲ. ಈ ಹಂತದಲ್ಲಿ ಅಂದು ಮೈಸೂರು ರಾಜ್ಯದ ದಿವಾನರಾಗಿದ್ದ ಸರ್. ವಿಶ್ವೇಶ್ವರಯ್ಯನವರು ತಮ್ಮ ಕೆಲಸಕ್ಕೆ ರಾಜೀನಾಮೆ ಇತ್ತರು. ನಂತರ ಬ್ರಾಹ್ಮಣೇತರರಾದ ಕಾಂತರಾಜ್ ಅರಸ್‌ರವರ ನೇಮಕಾತಿ ಹಿಂದುಳಿದ ವರ್ಗಕ್ಕೆ ದೊರಕಿದ ಜಯವಾಗಿತ್ತು.

ಇವರು ಅಸ್ಪೃಶ್ಯರನ್ನೂ ಒಳಗೊಂಡಂತೆ ಹಿಂದುಳಿದ ಜಾತಿ, ವರ್ಗದವರಿಗೆ ಅನುಕೂಲವಾಗುವಂತಹ ಹಲವಾರು ಯೋಜನೆಗಳನ್ನು ಜಾರಿಗೆ ತಂದರು. ಶಿಕ್ಷಣದಲ್ಲಿ ಸ್ಕಾಲರ್‌ಶಿಪ್ ಹಾಗೂ ರಿಯಾಯಿತಿಗಳನ್ನು ನೀಡಲಾಯಿತು. ನಾಗರಿಕ ಸೇವಾ ಉದ್ಯೋಗಗಳಲ್ಲಿ ಹಿಂದುಳಿದ ವರ್ಗ/ಜಾತಿಯವರ ಭಾಗವಹಿಸುವಿಕೆ ಹೆಚ್ಚಾಯಿತು. ರಾಜ್ಯದ ಎಲ್ಲಾ ಉದ್ಯೋಗ ಸಮಿತಿಗಳೂ ತಮ್ಮ ವಾರ್ಷಿಕ ವರದಿಗಳಲ್ಲಿ ವ್ಯಕ್ತಿಗಳ ಜಾತಿಯ ವಿವರಗಳನ್ನು ನೀಡಬೇಕೆಂದು ಆದೇಶವನ್ನು ನೀಡಲಾಯಿತು.

**ಸ್ವಾತಂತ್ರ್ಯದ ನಂತರ**

ಸ್ವಾತಂತ್ರ್ಯಾ ನಂತರ, ಹಿಂದುಳಿದ ಜಾತಿ, ವರ್ಗಗಳ ಒಳಿತಿನ ಉದ್ದೇಶಕ್ಕಾಗಿ ನಾಗನಗೌಡ ಸಮಿತಿಯೂ ಸ್ಥಾಪಿತಗೊಂಡಿತು. ಈ ಸಮಿತಿಯು ಎಸ್.ಟಿ., ಎಸ್.ಸಿ.ಯ ಹೊರತಾಗಿ ಇತರ ಹಿಂದುಳಿತ ಜಾತಿ/ವರ್ಗಗಳಿಗೆ 57% ಮೀಸಲಾತಿಯನ್ನು ಬೆಂಬಲಿಸಿತು. ಈ ಆದೇಶವನ್ನು ಹೈಕೋರ್ಟ್‌ನಲ್ಲಿ ಪ್ರಶ್ನಿಸಲಾಯಿತು. ಹಾಗಾಗಿ ಈ ಮೀಸಲಾತಿಯ ಆದೇಶವನ್ನು 1959ರಲ್ಲಿ ರದ್ದುಗೊಳಿಸಲಾಯಿತು. ಬ್ರಾಹ್ಮಣೇತರ ಲಿಂಗಾಯಿತ ಹಾಗೂ ಒಕ್ಕಲಿಗ ಸಮುದಾಯದವರು ಬ್ರಾಹ್ಮಣ ಪ್ರಭುತ್ವದ ವಿರುದ್ಧ ತಮ್ಮ ಹೋರಾಟವನ್ನು 1972ರ ಆಡಳಿತದಲ್ಲಿದ್ದ ಸರ್ಕಾರದ ಬೆಂಬಲದಿಂದ ಮುಂದುವರಿಸಿದರು. ರಾಜ್ಯದ ಚರಿತ್ರೆಯಲ್ಲಿ ಮೊಟ್ಟ ಮೊದಲ ಬಾರಿಗೆ ಹಿಂದುಳಿದ ಜಾತಿಯನ್ನು ಪ್ರತಿನಿಧಿಸುವ ದೇವರಾಜ್ ಅರಸ್‌ರವರು ರಾಜ್ಯದ ಮುಖ್ಯಮಂತ್ರಿಯಾದರು. 1975ರಲ್ಲಿ ಹಾವನೂರರ ನಾಯಕತ್ವದಲ್ಲಿ ಇನ್ನೊಂದು ಹಿಂದುಳಿದ ಜಾತಿ/ವರ್ಗದವರ ಸಮಿತಿಯನ್ನು ಸ್ಥಾಪಿಸಿದರು. ಎಲ್. ಜಿ. ಹಾವನೂರ್ ಸಮಿತಿಯ ವರದಿಯು ಹಿಂದುಳಿದ ಜಾತಿ/ವರ್ಗಗಳಲ್ಲಿ ಒಂದು ಹೊಸ ಅರಿವನ್ನು ಹುಟ್ಟುಹಾಕಿತು. ಮೊಟ್ಟ ಮೊದಲ ಬಾರಿಗೆ ಹಿಂದುಳಿದ ಜಾತಿ/ವರ್ಗದ ಜನರನ್ನೊಳಗೊಂಡ ಸಮಿತಿಯು ನೇಮಕಗೊಂಡಿತ್ತು. ಈ ವರದಿಯು ಒಕ್ಕಲಿಗರನ್ನೊಳಗೊಂಡಿತ್ತು ಹಾಗೂ ಲಿಂಗಾಯಿತರನ್ನು ಕೈಬಿಡಲಾಗಿತ್ತು. ಹಾಗಾಗಿ ಲಿಂಗಾಯಿತರು ಈ ವರದಿಯನ್ನು ವಿರೋಧಿಸಿದರು. ಅನಂತರ 11 ವರ್ಷಗಳ ನಂತರ ಕರ್ನಾಟಕ ರಾಜ್ಯದ ಮುಖ್ಯಮಂತ್ರಿ ರಾಮಕೃಷ್ಣ ಹೆಗಡೆಯವರು ವೆಂಕಟಸ್ವಾಮಿಯವರ ನೇತೃತ್ವದಲ್ಲಿ ಮೂರನೆಯ ಹಿಂದುಳಿದ ವರ್ಗದ ಸಮಿತಿಯನ್ನು ಸ್ಥಾಪಿಸಿದರು. ಈ ಸಮಿತಿಯು ಒಕ್ಕಲಿಗರನ್ನು ಹಿಂದುಳಿದ ವರ್ಗ/ಜಾತಿಯ ಪಟ್ಟಿಯಿಂದ ತೆಗೆದುಹಾಕಿತು. ಒಕ್ಕಲಿಗರು ಹಿಂದುಳಿದ ವರ್ಗದ ಪಟ್ಟಿಯಲ್ಲಿ ಸೇರಲು ಮತ್ತೆ ಹೋರಾಟ ನಡೆಸಿದರು. ಒಟ್ಟಿನಲ್ಲಿ ಹೇಳುವುದಾದರೆ, ಬ್ರಾಹ್ಮಣೇತರ ಜಾತಿಯವರು ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗದ ಹೊರತಾಗಿ ತಾವು ಮೀಸಲಾತಿಯ ಸವಲತ್ತನ್ನು ಪಡೆದುಕೊಳ್ಳಲೇಬೇಕೆಂದು ತೀವ್ರವಾಗಿ ಹೋರಾಟ ನಡೆಸತೊಡಗಿದರು. ಈ ವರ್ಗಗಳು ಆಡಳಿತದಲ್ಲಿ ಮೀಸಲಾತಿಯನ್ನು ಪಡೆದುಕೊಳ್ಳುವಲ್ಲಿ ಯಶಸ್ವಿಯಾದವು.

ಈ ಮೇಲ್ಕಂಡ ಸಮಿತಿಗಳಾಗಲೀ, ಕಮಿಷನ್‌ಗಳಾಗಲೀ ಸ್ತ್ರೀಯರ ಪ್ರಾತಿನಿಧ್ಯತ್ವವನ್ನೇ ಹೊಂದಿರಲಿಲ್ಲ. ಹಳೆಯ ಮೈಸೂರು ಪ್ರಾವಿನ್ಸ್ ಸಂದರ್ಭದಲ್ಲಿ ಮಹಿಳೆಯರ ಧ್ವನಿಗಳು ಸಣ್ಣದಾಗಿ ಕೇಳಿಸಿದ್ದರೂ ಸಹ ಮಹಿಳೆಯರ ಹಕ್ಕು ಹಾಗೂ ಸ್ಥಳೀಯ ಪ್ರಾತಿನಿಧ್ಯಕ್ಕಾಗಿ ಬೇಡಿಕೆಗಳು ಇದ್ದವು. ಆದರೆ ಶಿಕ್ಷಣದಲ್ಲಾಗಲೀ ಅಥವಾ ಸರ್ಕಾರಿ ಕೆಲಸಗಳಲ್ಲಿ ಮೀಸಲಾತಿಗಾಗಲೀ ಸಂಬಂಧಿಸಿದಂತೆ ಯಾವ ಪ್ರಶ್ನೆಗಳೂ ಇರಲಿಲ್ಲ. ಮೀಸಲಾತಿಯನ್ನು ಬಳಸಿಕೊಂಡ ಮಹಿಳೆಯರ ಶೇಕಡಾವಾರುವಿನ ಬಗ್ಗೆ ಯಾವುದೇ ವರದಿಯೂ ದೊರೆಯುವುದಿಲ್ಲ. ವರದಿಗಳು ಅಥವಾ ಕಮಿಷನ್‌ಗಳು ಕಾಣಿಸಿಕೊಂಡಾಗ ಜಾತಿಗಳನ್ನು ಸೇರಿಸುವ ಅಥವಾ ಸೇರಿಸದಿರುವ ಬಗ್ಗೆ, ದೊರಕಿರುವ/ದೊರಕದಿರುವ ಸವಲತ್ತುಗಳ ಬಗ್ಗೆ ವಿರೋಧಗಳು ಕಂಡುಬಂದರೂ ಮಹಿಳಾ ಮೀಸಲಾತಿಯ ಬಗ್ಗೆ ಚಕಾರವೆತ್ತದಿರುವುದು ಕಂಡುಬರುತ್ತದೆ. ಅಂದರೆ ಯಾವುದೇ ನಿರ್ದಿಷ್ಟ ಜಾತಿಗೆ ಸಿಗುವ ಮೀಸಲಾತಿಯು ಅಲ್ಲಿನ ಮಹಿಳೆಯರಿಗೆ ಮೀಸಲಾತಿಯನ್ನು ನೀಡಿಯೇ ನೀಡುತ್ತವೆ ಎಂಬ ಯಾವ ಗ್ಯಾರಂಟಿಯೂ ಇರುವುದಿಲ್ಲ. 1930ರಲ್ಲಿ ಕಮಲಮ್ಮ ಹಾಗೂ ಸಾಕಮ್ಮ ಎಂಬ ಇಬ್ಬರು ಮಹಿಳಾ ಪ್ರತಿನಿಧಿಗಳು ಶಾಸಕಾಂಗದಲ್ಲಿ ಇದ್ದುದು ಕಂಡುಬರುತ್ತದೆ.

ಕರ್ನಾಟಕ ಚರಿತ್ರೆಯಲ್ಲಿ ಮೀಸಲಾತಿಯ ಪ್ರಶ್ನೆಯು ಬೇರೆ ಬೇರೆ ಸಂದರ್ಭದಲ್ಲಿ ಭಿನ್ನ ಭಿನ್ನ ಅಂಶಗಳನ್ನು ಬಳಸಿಕೊಂಡುದು

ಕಂಡುಬರುತ್ತದೆ. ಜಾತಿ, ಶಿಕ್ಷಣ, ಆರ್ಥಿಕ ಹಿಂದುಳಿದಿರುವಿಕೆ, ಸಾಮಾಜಿಕ ಹಿಂದುಳಿದಿರುವಿಕೆ ಹೀಗೆ ವಿವಿಧ ಅಂಶಗಳು ಚರ್ಚೆಯಲ್ಲಿ, ವರದಿಗಳಲ್ಲಿ ಮೀಸಲಾತಿಯ ನಿರ್ಧರಿಸುವ ಅಂಶಗಳಾಗಿ ಕಾಣಿಸಿಕೊಂಡಿವೆ. ಮಹಿಳಾ ಪ್ರಶ್ನೆ ಸಂಪೂರ್ಣವಾಗಿ ಇಲ್ಲವಾಗಿತ್ತು. 1980ರಲ್ಲಿ ಮಾತ್ರ ಲಿಂಗಾಧಾರಿತ ಅಂಶ ಮೀಸಲಾತಿಯನ್ನು ನಿರ್ಧರಿಸುವ ಅಂಶವಾಗಿ ಕಂಡುಬಂದಿದೆ.

1989ರಲ್ಲಿ ಮಂಡಲ ವರದಿಯು ಕೇಂದ್ರೀಯ ಸೇವೆಗಳಲ್ಲಿ 27% ಮೀಸಲಾತಿಯನ್ನು ಬೆಂಬಲಿಸಿತು. ಆದರೆ ಬೇರೆ ಎಲ್ಲಾ ಕಡೆ ಗಲಾಟೆಗಳಾದಂತೆ ಕರ್ನಾಟಕದಲ್ಲೂ ಮಂಡಲ್ ವರದಿಯು ಜಾತಿ ಹಾಗೂ ಕೋಮುವಾದಿ ಗುಂಪುಗಳಿಂದ ವಿರೋಧಿಸಲ್ಪಟ್ಟಿತು.

ಕರ್ನಾಟಕದಲ್ಲಿ ಈಗಿನ ಮೀಸಲಾತಿಯು ಹಿಂದುಳಿದ ವರ್ಗ/ಜಾತಿಯವರಿಗೆ ಸಂಬಂಧಿಸಿದಂತೆ ಈ ರೀತಿ ಇದೆ. ಸರ್ಕಾರದ GO. No. SW 150 BCA ದಿನಾಂಕ 17-9-94ರ ಪ್ರಕಾರ ಈ ಕೆಳಗೆ ತೋರಿಸಿದಂತೆ ಸರ್ಕಾರಿ ಸೇವೆಗಳಲ್ಲಿ ಕೆಳಕಂಡ ಗುಂಪುಗಳು ಮೀಸಲಾತಿಯನ್ನು ಪಡೆಯುತ್ತಿವೆ.

| | |
|---|---|
| ಗ್ರೂಪ್ - 1 | 4% (ಅತ್ಯಂತ ಹಿಂದುಳಿದ ಜಾತಿ) |
| ಗ್ರೂಪ್ - 2 (A) | 15% (ಹಿಂದುಳಿದ ಜಾತಿ) |
| ಗ್ರೂಪ್ - 2 (B) | 4% (ಮುಸ್ಲಿಂ) |
| ಗ್ರೂಪ್ - 3(A) | 4% (ಒಕ್ಕಲಿಗರು ಮತ್ತು ಇತರ ಜಾತಿಯವರು) ) |
| ಗ್ರೂಪ್ - 3(B) | 5% (ಲಿಂಗಾಯಿತರು ಮತ್ತು ಇತರ ಜಾತಿಯವರು) |
| ಪರಿಶಿಷ್ಟ ಜಾತಿ | 15% |
| ಪರಿಶಿಷ್ಟ ಆದಿವಾಸಿಗಳು | 3% |
| ಒಟ್ಟು | 50% |

**ರಾಜಕೀಯ ಕ್ಷೇತ್ರದಲ್ಲಿ ಹಿಂದುಳಿದ ವರ್ಗಗಳಿಗಿರುವ ಮೀಸಲಾತಿ**

ಇತರ ಹಿಂದುಳಿದ ಜಾತಿ/ವರ್ಗಗಳಿಗೆ ಶಾಸಕಾಂಗದಲ್ಲಿ ಅವರಿರುವ ಜನಸಂಖ್ಯೆಗನುಗುಣವಾಗಿ ಮೀಸಲಾತಿ ದೊರಕಿದೆ. ಬ್ರಾಹ್ಮಣರು, ಲಿಂಗಾಯಿತರು ಹಾಗೂ ಒಕ್ಕಲಿಗರು ಇವರಿಗೆ ಹೆಚ್ಚು ಸೌಲಭ್ಯಗಳು ಸಾಂಸ್ಕೃತಿಕವಾಗಿ ದೊರಕಿವೆ. ಸಂವಿಧಾನದ ರಿಯಾಯಿತಿಗಳು ಇಲ್ಲದಿರುವ ಕಾರಣಕ್ಕಾಗಿ ಕರ್ನಾಟಕದಲ್ಲಿ ಹಿಂದುಳಿದ ಜಾತಿ/ವರ್ಗಗಳಿಗೆ ಸಾಕಷ್ಟು ಪ್ರಾತಿನಿಧ್ಯ ಸಿಕ್ಕಿಲ್ಲ. ಈ ಕೆಳಕಂಡ ಪಟ್ಟಿಯು ಹಿಂದುಳಿದ ವರ್ಗಗಳಿಗಿರುವ ಶಾಸಕಾಂಗದ ಪ್ರಾತಿನಿಧಿತ್ವವನ್ನು ತೋರಿಸುತ್ತದೆ. ಮಹಿಳೆಯರ ಒಟ್ಟು ಜನಸಂಖ್ಯೆಯನ್ನು ಹೋಲಿಸಿದರೆ ಮೀಸಲಾತಿಯ ಸೌಲಭ್ಯ ಹೊಂದಿರುವ ಹೆಂಗಸರ ಶೇಕಡಾವಾರು ನಿರ್ಲಕ್ಷ್ಯವೆನ್ನುವಂತಿದೆ.

| ವರ್ಷ | ಸ್ಥಾನದ ಸಂಖ್ಯೆ | (ಶೇಕಡಾವಾರು ಪ್ರತಿನಿಧಿತ್ವ ಸರ್ಕಾರದಲ್ಲಿ) |
|---|---|---|
| 1952 | 11 | 9 |
| 1957 | 22 | 15 |
| 1962 | 20 | 14 |
| 1967 | 17 | 12 |
| 1972 | 37 | 22 |
| 1978 | 52 | 25 |
| 1983 | 50 | 24 |
| 1989 | 54 | 25 |
| 1994 | 37 | 16 |
| 1999 | - | - |

1977ರಲ್ಲಿ ಅಶೋಕ್ ಮೆಹ್ತಾ ಸಮಿತಿಯನ್ನು ಆಧರಿಸಿ ಜನತಾ ದಳ ಸರ್ಕಾರವು ನಜೀರ್ ಸಾಬರ ನೇತೃತ್ವದಲ್ಲಿ ಪಂಚಾಯತ್ ರಾಜ್ಯ ವ್ಯವಸ್ಥೆಯನ್ನು 1983ರಲ್ಲಿ ಜಾರಿಗೆ ತಂದಿತು. 1992ರಲ್ಲಿ ಸಂವಿಧಾನದ 72ನೇ ಕಾನೂನಿನಲ್ಲಿ ತಂದ ಬದಲಾವಣೆಯು ಮಹಿಳೆಯರಿಗೆ 33% ಮೀಸಲಾತಿಯನ್ನು ದೃಢೀಕರಿಸಿತು. ಇದನ್ನು ಕರ್ನಾಟಕ ಸರ್ಕಾರವು ತಕ್ಷಣವೇ ಜಾರಿಗೆ ತಂದಿತು. ಈ

ಮೀಸಲಾತಿಯಿಂದಾಗಿ ಸಾವಿರಾರು ಹೆಂಗಸರು ಸ್ಥಳೀಯ ರಾಜಕೀಯದಲ್ಲಿ ಪಂಚಾಯಿತಿಗಳ ಮೂಲಕ ಭಾಗವಹಿಸುವಂತಾಯಿತು. ರಾಜ್ಯದಲ್ಲಿ ಜನತಾ ದಳ ಸರ್ಕಾರ ಅಸ್ತಿತ್ವದಲ್ಲಿರುವಾಗ, ರಾಮಕೃಷ್ಣ ಹೆಗಡೆಯವರ ಸರ್ಕಾರವು ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗ ಹಾಗೂ ಇತರ ಹಿಂದುಳಿದ ಜಾತಿಯವರಿಗೆ ಹಾಗೂ ಮಹಿಳೆಯರ ಮೀಸಲಾತಿ ಒಳಗೊಂಡಂತೆ ಪಂಚಾಯಿತಿ ಚುನಾವಣೆ ನಡೆಸಲು ಮುಂದಾದರು. ಈ ಬಗ್ಗೆ ಕಾನೂನು ಜಾರಿಯಾದುದಲ್ಲದೇ ಪ್ರಥಮ ಬಾರಿಗೆ ಚುನಾವಣೆಯನ್ನು ನಡೆಸಲಾಯಿತು. 1987ರಿಂದ ಪಂಚಾಯಿತಿ ಸದಸ್ಯರ ಅವಧಿ ಪ್ರಾರಂಭವಾಗಿತ್ತು. 1993ರಲ್ಲಿ ಮತ್ತೊಮ್ಮೆ ಪಂಚಾಯಿತಿಯ ಚುನಾವಣೆ ನಡೆಯಿತು. ಈ ಹೊತ್ತಿಗಾಗಲೇ ಕೇಂದ್ರ ಸರ್ಕಾರ ಸಂವಿಧಾನದ 73ನೆಯ ಕಾನೂನಿನಲ್ಲಿ ಸುಧಾರಣೆ ತಂದಿತು. ಆ ಪ್ರಕಾರ ಸ್ಥಳೀಯ ಸಂಸ್ಥೆಗಳು ಇಡಿಯ ದೇಶದಲ್ಲಿ ಏಕಪ್ರಕಾರವಾಗಿ ರೂಪುಗೊಂಡವು.

1993ರ ಕರ್ನಾಟಕ ರಾಜ್ಯ ಪಂಚಾಯಿತಿಯ ಕಾನೂನು 33.3% ಸೀಟುಗಳನ್ನು ಇತರ ಹಿಂದುಳಿದ ಜಾತಿ/ವರ್ಗಗಳಿಗೂ, 15% ಸೀಟುಗಳನ್ನು ಪರಿಶಿಷ್ಟ ಜಾತಿಯವರಿಗೂ, 3% ಸೀಟುಗಳನ್ನು ಪರಿಶಿಷ್ಟ ವರ್ಗದವರಿಗೂ ಮೀಸಲಾತಿ ನೀಡಲಾಯಿತು. 33.3% ಸೀಟುಗಳನ್ನು ಮಹಿಳೆಯರಿಗಾಗಿ ಮೀಸಲಿಡಲಾಯಿತು. 1993ರ ಪಂಚಾಯಿತಿ ಚುನಾವಣೆಗಳಲ್ಲಿ ಹಿಂದುಳಿದ ವರ್ಗಗಳಿಗೆ ದೊರಕಿದ್ದ ಪ್ರಾತಿನಿಧ್ಯ ಈ ರೀತಿ ಇದೆ.

| *ಪಂಚಾಯತ್* | *ಒಟ್ಟು* | *ಮಹಿಳೆಯರು* | *ಶೇಕಡಾವಾರು* |
|---|---|---|---|
| ಗ್ರಾಮ | 26,840 | 10,724 | 39.98 |
| ತಾಲೂಕ್ | 1,117 | 441 | 38.48 |
| ಜಿಲ್ಲಾ | 304 | 107 | 35.19 |

ಪಂಚಾಯಿತಿಯಲ್ಲಿ ಚುನಾಯಿತರಾದ ಮಹಿಳೆಯರ ಸಾಮಾನ್ಯ ಅನುಭವಗಳನ್ನು ಈ ರೀತಿ ಪಟ್ಟಿ ಮಾಡಬಹುದಾಗಿದೆ.

'ರಾಜಕೀಕರಣ' ನಡೆಯುತ್ತದೆ.

ಅನೇಕ ವಿಚಾರಗಳಲ್ಲಿ ತರಬೇತಿ ಸಿಗುತ್ತದೆ.

ಹೊರಗಿನ ಪ್ರಪಂಚದ ಸಂಪರ್ಕಗಳು ಹೆಚ್ಚಾಗುತ್ತವೆ.

ಮಹಿಳಾ ಪ್ರತಿನಿಧಿಗಳು ನೀರಿನ ಸಮಸ್ಯೆಗೆ, ಶುಚಿತ್ವದ ಸಮಸ್ಯೆಗೆ ಹೆಚ್ಚು ಪ್ರಾಮುಖ್ಯತೆ ನೀಡುತ್ತಾರೆ. ಮಹಿಳೆಯರಿಗೆ ಮನೆ ಸಾಲ, ಪಟ್ಟಾ ಹಾಗೂ ಅವರಿಗೆ ಕಾಂಟ್ರ್ಯಾಕ್ಟ್ ನೀಡುತ್ತಾರೆ.

ಕೆಲವು ಸಂದರ್ಭಗಳಲ್ಲಿ ಮಹಿಳೆಯರನ್ನು ಕೇಳದಿರುವುದಕ್ಕಾಗಿ ಹಾಗೂ ಹೆಂಗಸರನ್ನು ನಿರ್ಲಕ್ಷಿಸುವುದಕ್ಕಾಗಿ, ಅವರಿಗೆ ಸಹಕಾರ ನೀಡುವುದಕ್ಕಾಗಿ ಮಹಿಳೆಯರು ಅಧ್ಯಕ್ಷರ ವಿರುದ್ಧ 'ನೋ ಕಾನ್‌ಫಿಡೆನ್ಸ್ ಮೋಷನ್' ಮಾಡಿದ್ದೂ ಇದೆ.

ಕೇವಲ 'ರಬ್ಬರ್ ಸ್ಟ್ಯಾಂಪ್‌ಗಳು' ಮಾತ್ರ ಸ್ವತಂತ್ರವಾಗಿ ನಿರ್ಧಾರವನ್ನು ತೆಗೆದುಕೊಳ್ಳಲಾರರು.

ಕುಟುಂಬದ ಗಂಡಸರು ಯಾವಾಗಲೂ ಪಂಚಾಯಿತಿ ವಿಚಾರಗಳಲ್ಲಿ ತಲೆ ಹಾಕುತ್ತಾರೆ.

ಪರಿಶಿಷ್ಟ/ವರ್ಗ/ಜಾತಿಯ ಮಹಿಳೆಯರು ಅಧ್ಯಕ್ಷರು ಅಥವಾ ಉಪಾಧ್ಯಕ್ಷರಾಗುವುದಕ್ಕೆ ಬೆಂಬಲ ನೀಡುವುದಿಲ್ಲ. ಮಹಿಳಾ ಪ್ರತಿನಿಧಿಗಳನ್ನು ಕೇಳುವುದೇ ಇಲ್ಲ.

ಚುನಾಯಿತ ಮಹಿಳೆಯರು ಜಾತಿಯಿಂದಾಗಿ ಒಡೆದು ಹೋಗಿರುತ್ತಾರೆ.

ಪಕ್ಷಗಳ ಹಿನ್ನೆಲೆಯಿಂದ ಮಹಿಳೆಯರು ಬರುವುದರಿಂದ ಪಕ್ಷವನ್ನು ಮೀರಿ ಇತರ ಮಹಿಳೆಯರೊಟ್ಟಿಗೆ/ಸದಸ್ಯರೊಟ್ಟಿಗೆ ಸಹಕಾರ ಕಷ್ಟ.

ಲಿಂಗಾಧಾರಿತ ಸಮಸ್ಯೆಗಳನ್ನು ಸ್ವತಂತ್ರವಾಗಿ ಕೈಗೆತ್ತಿಕೊಳ್ಳುವುದಿಲ್ಲ.

ಮೇಲ್ಕಂಡ ಅನುಭವಗಳು ಚುನಾಯಿತ ಮಹಿಳಾ ಸದಸ್ಯರ ಸಾಮಾನ್ಯ ಅನುಭವಗಳಾದಾಗ್ಯೂ ಸಹ ಮಹಿಳೆಯರಲ್ಲಿ ಒಂದು ಬಗೆಯ ರಾಜಕೀಯ ಪ್ರಜ್ಞೆ ಮೂಡತೊಡಗಿದೆ. ಕೆಲವು ಮಹಿಳೆಯರು ಪಂಚಾಯಿತಿಗಳಲ್ಲಿ ಚೆನ್ನಾಗಿ ಕೆಲಸ ಮಾಡುವುದಕ್ಕೋಸ್ಕರ,

ಮನೆಗೆಲಸದ ವಿಚಾರದಲ್ಲಿ ತಮ್ಮ ಕುಟುಂಬದ ಸದಸ್ಯರೊಡನೆ ಜಗಳವಾಡಿರುವುದೂ ಉಂಟು. 'ಮೀಸಲಾತಿ' ಮಹಿಳೆಯರಲ್ಲಿ ಮಹಿಳಾ ಶೋಷಣೆಯ ಬಗ್ಗೆ ಪ್ರಜ್ಞೆ ಹುಟ್ಟುಹಾಕಿರುವುದಲ್ಲದೇ ಅವುಗಳ ವಿರುದ್ಧ ಎಲ್ಲಿ ಸಾಧ್ಯವೋ ಅಲ್ಲಿ ಹೋರಾಡುವ ಸಾಮರ್ಥ್ಯವನ್ನೂ ಹುಟ್ಟುಹಾಕಿವೆ.

**ಪರಿಶಿಷ್ಟ ಜಾತಿಯ ಮೀಸಲಾತಿ**

ಬ್ರಾಹ್ಮಣೇತರರು ತಾವೂ ಶೋಷಣೆಗೆ ಒಳಗಾಗುತ್ತಿದ್ದರೂ ಇತರೇ ಜಾತಿಯೊಳಗೆ ಶೋಷಣೆಗೆ ಒಳಗಾದವರ ನೋವುಗಳನ್ನು ತಮ್ಮದೆಂದು ಪರಿಭಾವಿಸುವುದೇ ಇಲ್ಲ. ಅಸ್ಪೃಶ್ಯರು ಎಂದು ಕರೆಯಲ್ಪಟ್ಟರೂ ಇತರ ಅಸ್ಪೃಶ್ಯರೊಡನೆ ಜೊತೆಗೂಡಿ ಈ ಜಾತಿ ವ್ಯವಸ್ಥೆಯ ವಿರುದ್ಧ ಹೋರಾಡಬೇಕೆಂದು ಅವರು ಪ್ರಯತ್ನಿಸುವುದೇ ಇಲ್ಲ. ರಾಜರಾಳ್ವಿಕೆಯ ಮೈಸೂರಿನಲ್ಲಿದ್ದ ಸರ್ಕಾರಿ ಆದೇಶದ ಪ್ರಕಾರ ಶಾಲೆಗಳಲ್ಲಿ ಬ್ರಾಹ್ಮಣರು, ಮುಸ್ಲಿಂ, ಅಸ್ಪೃಶ್ಯರನ್ನು ಒಳಗೊಂಡಂತೆ ಎಲ್ಲರನ್ನೂ ಸೇರಿಸುವ ಹಂತದಲ್ಲಿ ಹಿಂದುಳಿದ ಜಾತಿ/ವರ್ಗದವರು ತಮ್ಮ ಮಕ್ಕಳನ್ನು ಶಾಲೆಯಿಂದ ಬಿಡಿಸಿಬಿಟ್ಟರು. ಎಲ್ಲಾ ಜಾತಿಯವರು ಒಗ್ಗೂಡಿ ಅಸ್ಪಶ್ಯ ಮಕ್ಕಳನ್ನು ಶಾಲೆಗೆ ಸೇರಿಸುವುದನ್ನು ವಿರೋಧಿಸಿದ್ದಾಗ್ಯೂ ಕೂಡಾ ಸರ್ಕಾರವು ಅಸ್ಪೃಶ್ಯರ ಮಕ್ಕಳಿಗಾಗಿ ಶಾಲೆ, ಶಿಕ್ಷಣವನ್ನು ಮುಂದುವರೆಸಿತು. ಬ್ರಾಹ್ಮಣೇತರರು ಹಾಗೂ ಮುಸ್ಲಿಂರಿಗಿಂತ ಹೆಚ್ಚಾಗಿ ರಾಜ್ಯದ ಪ್ರತಿನಿಧಿಗಳು ಹಾಗೂ ಮಹಾರಾಜ ಅಸ್ಪೃಶ್ಯರಿಗೆ ಸಾಮಾಜಿಕ ನ್ಯಾಯ ದೊರಕಿಸುವಲ್ಲಿ ಹೆಚ್ಚು ಆಸಕ್ತಿಯನ್ನು ತೋರಿಸಿದರು.

ರಾಜರಾಳ್ವಿಕೆಯ ಮೈಸೂರಿನಲ್ಲಿ ಹಿಂದುಳಿದ ವರ್ಗದವರಿಗೆ ಹಾಗೂ ಅಸ್ಪೃಶ್ಯರಿಗೆ ಅನೇಕ ಸೌಲಭ್ಯಗಳಿದ್ದವು. ಹಿಂದುಳಿದ ವರ್ಗದ ವಿದ್ಯಾರ್ಥಿಗಳು 5ನೆಯ ತರಗತಿಯವರೆಗೆ ಫೀಸಿನ ರಿಯಾಯಿತಿ ಪಡೆದರೆ, ಅಸ್ಪೃಶ್ಯ ವಿದ್ಯಾರ್ಥಿಗಳು ಹತ್ತನೆಯ ತರಗತಿಯವರೆಗೆ ಫೀಸಿನ ರಿಯಾಯಿತಿ ಪಡೆದರು. ಈ ಎರಡೂ ಪಂಗಡದ ವಿದ್ಯಾರ್ಥಿಗಳೂ ವಿದ್ಯಾರ್ಥಿ ವೇತನವನ್ನು ಹೊಂದುವಂತಾಯಿತು. ಅಸ್ಪೃಶ್ಯರ ಪ್ರತಿನಿಧಿಗಳನ್ನು ರಾಜ್ಯದಲ್ಲಿ ಹೊಂದುವುದಕ್ಕಾಗಿ ಚುನಾವಣೆಯ ವಿಧಾನದಲ್ಲಿ ಹಲವಾರು ಸುಧಾರಣೆಗಳನ್ನು ಮಾಡಲಾಯಿತು. ಸುಧಾರಣೆಗಳು ಅಸ್ಪೃಶ್ಯರನ್ನು ಒಳಗೊಳ್ಳಲು ಸಾಕಾಗಲಿಲ್ಲವೆನಿಸಿದಾಗ ಪ್ರಜಾ ಪ್ರತಿನಿಧಿ ಸಭಾದಲ್ಲಿ 25 ಸೀಟುಗಳನ್ನು ಅಸ್ಪೃಶ್ಯರಾಗಿ ಕಾದಿರಿಸಲಾಯಿತು. ಮೈಸೂರಿನ ದಿವಾನರಾಗಿದ್ದ ಕಾಂತರಾಜ್ ಅರಸ್‌ರವರು ಸರ್ಕಾರಿ ಆಡಳಿತದಲ್ಲಿ ಯಾವಾಗಲೂ ಅಸ್ಪೃಶ್ಯರಿಗೇ ಹೆಚ್ಚು ಆದ್ಯತೆ ನೀಡುತ್ತಿದ್ದರು.

1940ರವರೆಗೆ ಅಸ್ಪೃಶ್ಯರು ಯಾವುದೇ ಮುಖ್ಯ ಸ್ಥಾನವನ್ನು ಹೊಂದದಿದ್ದರೂ ಸಹ ಎಲ್ಲಾ ರಾಜಕೀಯ ಪಕ್ಷಗಳಿಗೂ ಅವರು ವಿಚಾರವಾಗಿ ಪರಿಣಮಿಸಿದರು. ಮೈಸೂರಿನ ರಾಜ್ಯಾಡಳಿತದಲ್ಲಿ ಅಸ್ಪೃಶ್ಯರ ಜನಸಂಖ್ಯೆ 20% ಇತ್ತು. ಅವರು ಬಹು ತಡವಾಗಿ ಸಂಘಟಿತರಾದರು. ಅವರು ಆದಿ ದ್ರಾವಿಡ ಅಭಿವೃದ್ಧಿ ಸಂಘ, ಆದಿ ಜಾಂಬವ ಸಂಘ ಎನ್ನುವಂತಹ ಸಂಘಟನೆಗಳನ್ನು ಸಂಘಟಿಸಿದರು. ಅನಂತರ ಅವರು ಅಸ್ಪೃಶ್ಯರಿಗಾಗಿ ಶಾಲೆ, ಹಾಸ್ಟೆಲ್‌ಗಳನ್ನು ಪ್ರಾರಂಭಿಸಿದರು. ಅನೇಕ ಸಂಘಟನೆಗಳು ಜನರಿಗೆ ರಾಜಕೀಯ ಅಧಿಕಾರವನ್ನು ಬೇಡಿಕೆಯಾಗಿಡುವಲ್ಲಿ ಆಸಕ್ತಿ ತೋರಿಸಲಾರಂಭಿಸಿದವು.

ಅಂಬೇಡ್ಕರ್‌ರವರು ಅನೇಕ ಬಾರಿ ಕರ್ನಾಟಕಕ್ಕೆ ಭೇಟಿ ಇತ್ತಾಗ್ಯೂ ಕೂಡಾ ಮೈಸೂರ ರಾಜರ ಆಳ್ವಿಕೆಯ ಕಾಲದಲ್ಲಿದ್ದ ಪರಿಶಿಷ್ಟ ವರ್ಗದವರ ಮೇಲೆ ಅವರ ಚಳುವಳಿ ನೇರವಾದ ಪ್ರಭಾವವನ್ನು ಬೀರಿರಲಿಲ್ಲ. ಸ್ವಾತಂತ್ರ್ಯಾ ನಂತರದಲ್ಲಿ 1952ರಲ್ಲಿ 20 ಜನ ಪರಿಶಿಷ್ಟ ಜಾತಿ/ವರ್ಗದ ಜನರು ಪಾರ್ಲಿಮೆಂಟಿನ ಪ್ರಜಾಪ್ರಭುತ್ವ, ನಿರ್ಬಂಧಿತ ಅಧಿಕಾರದ (ಎಸ್.ಸಿ., ಎಸ್.ಟಿ. ಸದಸ್ಯರಾದ್ದರಿಂದ) ಪರಿಮಿತಿಯೊಳಗೆ ರಾಜ್ಯದ ಶಾಸಕಾಂಗವನ್ನು ಪ್ರವೇಶಿಸಿ ರಾಜಕೀಯದಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳತೊಡಗಿದರು. ಇತರ ರಾಜ್ಯದ ನಕ್ಸಲ್‌ಭಾರಿ ಚಳುವಳಿ, ದಲಿತ ಪ್ಯಾಂಥರ್ ಚಳುವಳಿಗಳು ಕರ್ನಾಟಕದ ವಿದ್ಯಾವಂತ ದಲಿತರನ್ನು ಈ ಸಂದರ್ಭದಲ್ಲಿ ವಿಶೇಷವಾಗಿ ಪ್ರಭಾವಿಸಿದ್ದವು. 1970ರ ಪ್ರಾರಂಭದಲ್ಲಿ ಒಂದಿಷ್ಟು ವಿದ್ಯಾವಂತ ದಲಿತ ಯುವಕರು ಸಮಾಜವಾದಿ ವಿಚಾರಧಾರೆಗಳಿಂದ ಪ್ರಭಾವಿತರಾಗಿದ್ದರು. ಬ್ರಾಹ್ಮಣೇತರ ಇತರ ವರ್ಗಗಳು ಬಹಳಷ್ಟು ಕಾಲ ಹೊಂದಾಣಿಕೆಯನ್ನು ಉಳಿಸಿಕೊಳ್ಳಲು ಸಾಧ್ಯವಾಗಲಿಲ್ಲ. ವಿಡಂಬನೆಯೆಂದರೆ, ಬ್ರಾಹ್ಮಣೇತರ ಪ್ರಬಲ ಜಾತಿಗಳಾದ ಲಿಂಗಾಯಿತರ ಹಾಗೂ ಒಕ್ಕಲಿಗರು ಬ್ರಾಹ್ಮಣರ, ಬ್ರಾಹ್ಮಣಿಕೆಯ ವಿರುದ್ಧದ ಹೋರಾಟದಲ್ಲಿ ದಲಿತರ ಭಾಗವಹಿಸುವಿಕೆಯನ್ನು ಬೆಂಬಲಿಸಿದ್ದರು. ಆದರೆ ಸಾಮಾಜಿಕವಾಗಿ ದಲಿತರನ್ನು ಸಮಾನವಾಗಿ ಪರಿಗಣಿಸಲು ಸಿದ್ಧರಿರಲಿಲ್ಲ. ಭೂಮಿಗಳ ಒಡೆಯರಾಗಿದ್ದ ಇವರು ದಲಿತರಿಗೆ ಆರ್ಥಿಕ ಸವಲತ್ತುಗಳನ್ನು ಒದಗಿಸುವುದಕ್ಕೆ ವಿರೋಧಿಗಳಾಗಿದ್ದರು. ಈ ರೀತಿಯ ಬ್ರಾಹ್ಮಣೇತರ ಹಿಂದುಳಿದ ವರ್ಗಗಳ ದ್ವಂದ್ವ ನೀತಿಯಿಂದಾಗಿ ದಲಿತರು ಬ್ರಾಹ್ಮಣೇತರ ಕೂಟವನ್ನು ಬಿಟ್ಟು ದಲಿತ ಲೇಖಕರ, ಕಲಾವಿದರ ಯುವ ಸಂಘಟನೆಯನ್ನು ಸ್ಥಾಪಿಸಿದರು. ನೂರಾರು ದಲಿತ ಯುವಕರು ಈ

ಸಂಘಟನೆಯ ಸದಸ್ಯರಾದರು. ನಂತರದ ಸಭೆಯೊಂದರಲ್ಲಿ ಈ ಸಂಘಟನೆಯನ್ನು ದಲಿತ ಸಂಘರ್ಷ ಸಮಿತಿಯೆಂದು ಕರೆಯಲು ನಿರ್ಧರಿಸಲಾಯಿತು. 1976ರಲ್ಲಿ ದಲಿತ ಸಂಘರ್ಷ ಸಮಿತಿಯು ಭದ್ರಾವತಿಯಲ್ಲಿ ಅಸ್ತಿತ್ವಕ್ಕೆ ಬಂದಿತು. ಜಾತಿ ಹಾಗೂ ಬಂಡವಾಳಶಾಹಿತ್ವ ಎರಡೂ ದಲಿತರ ಮುಖ್ಯ ಶತ್ರು ಎಂದು ಭಾವಿಸಿದ ದಲಿತ ಸಂಘರ್ಷ ಸಮಿತಿ ಇವೆರಡನ್ನೂ ಒಟ್ಟಿಗೇ ಹೋರಾಡಬೇಕೆಂದು ತೀರ್ಮಾನಿಸಿತು. ದಲಿತ ಸಂಘರ್ಷ ಸಮಿತಿಯು ಸಂವಿಧಾನಾತ್ಮಕವಾಗಿ ನೀಡಲಾದ ತಮ್ಮ ಹಕ್ಕುಗಳಿಗಾಗಿ ಹೋರಾಟ ನಡೆಸುತ್ತಾ ಬಂದಿದ್ದಾರೆ.

ಕಡ್ಡಾಯ ಪ್ರಾಥಮಿಕ ಶಿಕ್ಷಣವನ್ನು ನೀಡುವುದು ಡೈರಕ್ಟೀವ್ ಪ್ರಿನ್ಸಿಪಲ್‌ನ 45ನೆಯ ವಿಧಿಯಲ್ಲಿ ರಾಜ್ಯದ ಯೋಜನೆ ಅಡಿಯಲ್ಲಿ ಮಾಡಿರುವುದರಿಂದ, ಈ ಸಮಸ್ಯೆಯು ರಾಜ್ಯದ ಇಚ್ಛೆಯ ಮೇರೆಗೆ ನಡೆಯುತ್ತದೆ. ಹಾಗಾಗಿ ಅತ್ಯಂತ ಹಿಂದುಳಿದ ವರ್ಗಗಳು ಶಿಕ್ಷಣ ಹಾಗೂ ಅಕ್ಷರ ಜ್ಞಾನದಿಂದ ವಂಚಿತವಾಗಿವೆ. ಇದು ನಗ್ನ ಸತ್ಯವಾಗಿರುವುದರಿಂದ ಸಾರ್ವಜನಿಕ ಸೇವಾ ಸ್ಥಾನಗಳಿಗೆ ಪರಿಶಿಷ್ಟ ಜಾತಿ ಹಾಗೂ ವರ್ಗದ ಜನರು ಅತ್ಯಂತ ತಡವಾಗಿ ಪ್ರವೇಶಿಸುತ್ತಾರೆ. ಅವರು ಸಾಮರ್ಥ್ಯ ಹೊಂದಿ ಇನ್ನೇನು ಪ್ರವೇಶಿಸುತ್ತಾರೆ ಎನ್ನುವ ಸಂದರ್ಭದಲ್ಲಿ ಇಡಿಯ ದೇಶದಲ್ಲಿ ಮೀಸಲಾತಿಯ ಬಗ್ಗೆಯೇ ದೊಡ್ಡ ಕೂಗೆದ್ದಿದೆ. ಕೋಮುವಾದಿಗಳು ಪರಿಶಿಷ್ಟ ಜಾತಿ/ವರ್ಗದ ಜನರು ಎಲ್ಲವನ್ನೂ ನುಂಗಿಹಾಕುತ್ತಿದ್ದಾರೆಂಬ ಕೂಗು, ಗದ್ದಲವನ್ನು ಎಬ್ಬಿಸಿಬಿಡುತ್ತಿದ್ದಾರೆ. ಸಾರ್ವಜನಿಕ ಸೇವಾ ಸ್ಥಾನಗಳಿಗೆ ಪರಿಶಿಷ್ಟ ಜಾತಿ/ವರ್ಗದವರು ಪ್ರವೇಶಿಸುತ್ತಿರುವುದನ್ನು ಸಹಿಸಿಕೊಳ್ಳುವುದಕ್ಕೆ ಕೋಮುವಾದಿಗಳಿಗೆ ಸಾಧ್ಯವಾಗುತ್ತಿಲ್ಲ. ಹಾಗಾಗಿ ಮೀಸಲಾತಿಯ ಸಮಸ್ಯೆಯು, ಜ್ವಲಂತ ಉರಿಯುವ ಸಮಸ್ಯೆಯಾಗಿ ಪರಿಣಮಿಸಿದೆ. ಮೂಲಭೂತ ಹಿಂದೂವಾದಿಗಳು ಮೀಸಲಾತಿಯನ್ನು ಎಲ್ಲಾ ರೀತಿಯಿಂದಲೂ ವಿರೋಧಿಸುತ್ತಿರುವುದೂ ಅಲ್ಲದೇ ಅದನ್ನು ಮುಂದುವರಿಸಬಾರದೆಂಬ ಬೇಡಿಕೆಯನ್ನಿಟ್ಟು ಹೋರಾಟ ನಡೆಸುತ್ತಿದ್ದಾರೆ.

ಈ ಕೆಳಕಂಡ ಅಂಕಿ-ಅಂಶಗಳು ಪರಿಶಿಷ್ಟ ಜಾತಿ, ವರ್ಗದವರಿಗೆ ಕಡ್ಡಾಯ ಶಿಕ್ಷಣ ನೀಡುವ ಬಗ್ಗೆ ಪ್ರಾಮಾಣಿಕ ಅಥವಾ ಗಂಭೀರ ಪ್ರಯತ್ನಗಳು ನಡೆದಿಲ್ಲವೆಂಬುದನ್ನು ತೋರಿಸುತ್ತಿವೆ. 1991ರ ಅಂಕಿ ಅಂಶದ ಪ್ರಕಾರ ಎಸ್.ಸಿ. ಜನಸಂಖ್ಯೆ 73,69,279 ಇದ್ದು 38.06% ಮಾತ್ರ ವಿದ್ಯಾವಂತರಾಗಿದ್ದರು. ಹಾಗೆಯೇ ಪರಿಶಿಷ್ಟ ವರ್ಗದ ಜನಸಂಖ್ಯೆ 19,15,691 ಇದ್ದು 36.01% ಮಾತ್ರ ಹೆಂಗಸರನ್ನೊಳಗೊಂಡಂತೆ ವಿದ್ಯಾವಂತರಿದ್ದರು.

ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ವರ್ಗಗಳಲ್ಲೂ ಇತರರಂತೆ ಸಾಮಾಜಿಕ ಉತ್ಪಾದನೆಯಲ್ಲಿ ಮಹಿಳೆಯರ ಭಾಗವಹಿಸುವಿಕೆ ಕಡಿಮೆ ಇತ್ತು. ಶಿಕ್ಷಣ ರಂಗದಲ್ಲೂ ಇತರ ಕಡೆಯಂತೆ ಇಲ್ಲಿಯೂ ಮಹಿಳೆಯರು ಹಿಂದುಳಿದಿದ್ದಾರೆ. ಪರಿಶಿಷ್ಟ ಜಾತಿ/ವರ್ಗದ ಮೀಸಲಾತಿಯಲ್ಲೂ ಸಹ ಲಿಂಗಾಧಾರಿತ ಪ್ರಶ್ನೆಯನ್ನು ಗಣನೆಗೇ ತೆಗೆದುಕೊಂಡಿರಲಿಲ್ಲ. ಹಾಗಾಗಿ ಯಾವುದೇ ಮೀಸಲಾತಿಯಲ್ಲೂ ಮಹಿಳೆಯರು 80ರ ದಶಕದ ತನಕ ಸೌಲಭ್ಯ ಪಡೆದಿರುವುದು ಕಂಡುಬರುವುದಿಲ್ಲ.

ಮೀಸಲಾತಿಯ ಪ್ರಶ್ನೆಯನ್ನು ಹೊಸ ಆರ್ಥಿಕ ನೀತಿಯಿಂದ ಉಂಟಾಗುತ್ತಿರುವ ಖಾಸಗೀಕರಣದ ಹಿನ್ನೆಲೆಯಲ್ಲಿ ನೋಡಬೇಕಾಗಿದೆ. ಕರ್ನಾಟಕದಲ್ಲಿ ಪಬ್ಲಿಕ್ ಸೆಕ್ಟರ್‌ನ ಮುಖ್ಯ ಕಾರ್ಖಾನೆಗಳು ಮುಚ್ಚಿಹೋಗುವ ಸ್ಥಿತಿಯಲ್ಲಿ ಇವೆ. ಬಹಳ ವರ್ಷಗಳಿಂದ ಸರ್ಕಾರಿ ಕೆಲಸಗಳಿಗೆ ರೆಕ್ರೂಟ್‌ಮೆಂಟ್ ನಿಂತುಹೋಗಿದೆ. ದಲಿತರ ಬದುಕು ಪತನದ ಅಂಚಿನಲ್ಲಿದೆ. ಏಕೆಂದರೆ ಸರ್ಕಾರಿ ಕೆಲಸಗಳೇ ಇಲ್ಲ, ಖಾಸಗಿ ಉದ್ಯಮಗಳಲ್ಲಿ ಮೀಸಲಾತಿ ಯೋಜನೆ ಜಾರಿಯಲ್ಲಿ ಇಲ್ಲ.

ಖಾಸಗಿ ರಂಗದ ಶಿಕ್ಷಣ ಪ್ರಸರಿಸುತ್ತಿದ್ದರೂ ಸಹ, 94% ಪರಿಶಿಷ್ಟ ಜಾತಿ ಹಾಗೂ ವರ್ಗದ ವಿದ್ಯಾರ್ಥಿಗಳು ಸರ್ಕಾರಿ ಅಥವಾ ಕಾರ್ಪೊರೇಷನ್ ಸ್ಕೂಲ್‌ಗಳಲ್ಲಿಯೇ ಓದುತ್ತಿದ್ದಾರೆ. ಈ ಸ್ಕೂಲ್‌ಗಳಲ್ಲಿ ಯಾವುದೇ ತರಹದ ಸೌಲಭ್ಯಗಳೂ ಇರುವುದಿಲ್ಲ. ಪರಿಶಿಷ್ಟ ಜಾತಿ/ವರ್ಗದವರಿಗೆ ಕೆಲವೆಡೆ ವಸತಿ ಸೌಕರ್ಯವಿರುವ ಹಾಸ್ಟೆಲ್‌ಗಳು ಇದ್ದರೂ, ಹೋಲಿಸಿದಾಗ ಹೆಣ್ಣು ಮಕ್ಕಳಿಗಿರುವ ಹಾಸ್ಟೆಲ್ ಸೌಲಭ್ಯಗಳು ಕಡಿಮೆ. ಹಾಸ್ಟೆಲ್‌ಗಳೊಳಗೆ ಇರುವ ಸೌಲಭ್ಯಗಳೂ ಕಡಿಮೆ. ಕರ್ನಾಟಕದ 79 ಸರ್ಕಾರಿ ಆಸ್ಪತ್ರೆ, 88 ಖಾಸಗಿ ಹಾಸ್ಟೆಲ್‌ಗಳಲ್ಲಿನ ನೀತಿ ಭಿನ್ನವಾಗಿಲ್ಲ. 13 ವರ್ಷದೊಳಗಿನ ಪರಿಶಿಷ್ಟ ಜಾತಿ/ವರ್ಗದ ಮಕ್ಕಳು ಇಲ್ಲಿ ಇದ್ದಾರೆ. ಸರ್ಕಾರವು 1223 (ಪ್ಯಾರಾಮೆಟ್ರಿಕ್) ಹಾಸ್ಟೆಲ್‌ಗಳನ್ನು ನಡೆಸುತ್ತಿದೆ. ಇದರಲ್ಲಿ 48,680 ಜನ ಹುಡುಗರಿದ್ದಾರೆ ಹಾಗೂ 11,045 ಜನ ಹುಡುಗಿಯರಿಗೆ ವಸತಿ ಒದಗಿಸಿದ್ದಾರೆ. 150 ಕಾಲೇಜುಗಳ ಹಾಸ್ಟೆಲ್‌ನಲ್ಲಿ 14,672 ಹುಡುಗರಿದ್ದರೆ 12,000 ಹುಡುಗಿಯರು ಮಾತ್ರ ಇದ್ದಾರೆ.

ಹಲವಾರು ಸಂಗತಿಗಳಲ್ಲಿ ದಲಿತ ಹುಡುಗರು/ಉಪಾಧ್ಯಾಯರು/ಉಪನ್ಯಾಸಕರು/ಪ್ರೊಫೆಸರ್ ಅನಕ್ಷರಸ್ಥರಾಗಿಯೇ ಉಳಿದಿದ್ದಾರೆ. ಅವರಿಗೆ ಸಂವಿಧಾನಾತ್ಮಕವಾಗಿ ನೀಡಲಾದ ಅವಕಾಶಗಳನ್ನು ಕೊಡುತ್ತಿಲ್ಲ ಹಾಗೂ ವ್ಯವಸ್ಥಾಪಕವಾಗಿ ಅವರನ್ನು ತುಳಿಯಲಾಗುತ್ತಿದೆ.

ಅನೇಕ ಶಿಕ್ಷಣ ಸಂಸ್ಥೆಗಳಲ್ಲಿ ಪರಿಶಿಷ್ಟ/ಜಾತಿ ಹಾಗೂ ವರ್ಗದವರನ್ನು ಕಾನೂನಿನನ್ವಯ ನೇಮಕಾತಿ ಮಾಡಿರುವುದೇ ಇಲ್ಲ. ಆದಾಗ್ಯೂ ಇವು ಸರ್ಕಾರದ ಗ್ರ್ಯಾಂಟ್ ಪಡೆಯುತ್ತವೆ.

ಇತ್ತೀಚಿನ ಎರಡು ತೀರ್ಪುಗಳು (1) ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ವರ್ಗದವರಿಗೆ ಸೂಪರ್ ಸ್ಪೆಷಾಲಿಟಿ ಕೋರ್ಸ್‌ಗಳಲ್ಲಿ ಮೀಸಲಾತಿ ರದ್ದು ಪಡಿಸುವುದು/ಸೀನಿಯಾರಿಟಿಗೆ ಸಂಬಂಧಿಸಿದಂತೆ ಇರುವ ತೀರ್ಪು. ಇವು ದಲಿತರ ಬಗ್ಗೆ ನ್ಯಾಯಾಂಗ 'ಹೊಂದಿರುವ ವಿರೋಧಿ ನಿಲುವುಗಳನ್ನು ತೋರಿಸುತ್ತವೆ.

ರಾಜ್ಯ ಸರ್ಕಾರದ ನಾಗರೀಕ ಹಕ್ಕು ಕಾದಿರಿಸುವ ಸೆಲ್ ಪ್ರಕಾರ ಪರಿಶಿಷ್ಟ ಜಾತಿ/ವರ್ಗಕ್ಕೆ ಸೇರಿಲ್ಲದ ಬಹಳಷ್ಟು ಜನ ಇಂದು ಸುಳ್ಳು ಸರ್ಟಿಫಿಕೇಟ್ ನೀಡುವ ಮೂಲಕ ಮೀಸಲಾತಿ ಸವಲತ್ತನ್ನು ಅನುಭವಿಸುತ್ತಿರುವುದಲ್ಲದೇ, ಪರಿಶಿಷ್ಟ ಜಾತಿ ಹಾಗೂ ವರ್ಗದವರಿಗೆ ನೀಡಿದ ಪ್ರಾಜೆಕ್ಟ್‌ಗಳನ್ನೂ ಸಹ ತಮ್ಮ ಉದ್ದೇಶಗಳಿಗಾಗಿ ಬಳಸಿಕೊಳ್ಳುತ್ತಿದ್ದಾರೆ.

ಮೀಸಲಾತಿಯು ಸಾಮಾಜಿಕ ನ್ಯಾಯ ದೊರಕಿಸಲು ಇರುವ ಅಸ್ತ್ರ. ಈ ಮೂಲಕ ರಾಜಕೀಯ/ಸಾಮಾಜಿಕ ಹಾಗೂ ಆರ್ಥಿಕ ಚಟುವಟಿಕೆಗಳಲ್ಲಿ ಶೋಷಿತ ಜನಾಂಗದ ಭಾಗವಹಿಸುವಿಕೆಯನ್ನು ಖಚಿತಗೊಳಿಸುವುದಾಗಿದೆ. ಡಾ. ಅಂಬೇಡ್ಕರ್‌ರವರು ತುಳಿತಕ್ಕೊಳಗಾದವರಿಗೆ ಸಾಮಾಜಿಕ ನ್ಯಾಯ ಒದಗಿಸುವುದಕ್ಕಾಗಿಯೇ ಸಂವಿಧಾನವನ್ನು ರೂಪಿಸುವಾಗ ಕ್ರಿಯಾಶೀಲರಾಗಿ ಭಾಗವಹಿಸಿದರು. ವಾಸ್ತವವಾಗಿ ಮೀಸಲಾತಿಯ ಸವಲತ್ತು ಯಾರಿಗೆ ತಲುಪಬೇಕೋ ಅವರಿಗೆ ತಲುಪುತ್ತಿಲ್ಲ.

ಪರಿಶಿಷ್ಟ ಜಾತಿ/ವರ್ಗದವರ ಮೀಸಲಾತಿಯಲ್ಲೂ ಮಹಿಳೆಯರ ಭಾಗವಹಿಸುವಿಕೆ ಹೋಲಿಸಿದಲ್ಲಿ ಅತ್ಯಂತ ಕಡಿಮೆ ಶೇಕಡಾವಾರನ್ನು ಹೊಂದಿದೆ. 1980ರ ದಶಕದವರೆಗೆ ಲಿಂಗಾಧಾರಿತ ಪ್ರಶ್ನೆಗಳು ಮೀಸಲಾತಿಯಲ್ಲಿ ಪ್ರಾಶಸ್ತ್ಯವನ್ನು ಹೊಂದಿರಲಿಲ್ಲ.

**ಪಬ್ಲಿಕ್ ಸೆಕ್ಟರ್ ಸರ್ವೀಸ್‌ಗಳಲ್ಲಿ**

ರಾಜ್ಯದ ಡೈರೆಕ್ಟೀವ್ ಪ್ರಿನ್ಸಿಪಲ್‌ನ 46ನೇ ವಿಧಿಯೂ ಹಿಂದುಳಿದ ಅದರಲ್ಲೂ ವಿಶೇಷವಾಗಿ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ವರ್ಗಗಳ ಶೈಕ್ಷಣಿಕ ಹಾಗೂ ಆರ್ಥಿಕ ಅಭಿವೃದ್ಧಿಗಳನ್ನು ಗಮನಿಸುವುದಕ್ಕೆ ತುಂಬಾ ಮಹತ್ವವನ್ನು ನೀಡುತ್ತದೆ. ಮೀಸಲಾತಿಗೆ ಸಂಬಂಧಿಸಿದಂತೆ ನ್ಯಾಯಾಂಗವನ್ನು ಹೊರಗಿಡಲಾಗಿದೆ. ರಾಜ್ಯ ಹಾಗೂ ಪಬ್ಲಿಕ್ ಸೆಕ್ಟರ್‌ಗಳು ಸಣ್ಣ ಪ್ರಮಾಣದಲ್ಲಿ ಇದ್ದರೆ, ಖಾಸಗಿ ಸೆಕ್ಟರ್ ಅತ್ಯಂತ ದೊಡ್ಡ ಪ್ರಮಾಣದಲ್ಲಿದೆ. ಇಲ್ಲಿ ಮೀಸಲಾತಿಯು ಜಾರಿಗೆ ಬರುವುದಿಲ್ಲ. ಅನೇಕ ಟ್ರಸ್ಟ್‌ಗಳಲ್ಲಿ ಕೂಡಾ ಮೀಸಲಾತಿ ಇರುವುದಿಲ್ಲ. ಟ್ರಸ್ಟ್‌ಗಳೇ ಸ್ವಾಯತ್ತ ಸಂಸ್ಕೃತಿಗಳ ಯೋಜನೆಯನ್ನು ರೂಪಿಸುತ್ತವೆ. ಬ್ಯಾಂಕಿಂಗ್ 1970ರಿಂದ ಮೀಸಲಾತಿಯನ್ನು ನೀಡುತ್ತಿವೆ.

ಈ ಕೆಳಗಿನ ಪಟ್ಟಿಯು 1995ರಲ್ಲಿ ಪರಿಶಿಷ್ಟ ಜಾತಿ/ವರ್ಗದವರು ಪ್ರತಿನಿಧಿಸಿದ್ದನ್ನು ತಿಳಿಸುತ್ತದೆ.

| ಗುಂಪುಗಳು | ಪರಿಶಿಷ್ಟ ವರ್ಗ | ಪ್ರತಿನಿಧಿತ್ವದ ಶೇಕಡಾ | ಪರಿಶಿಷ್ಟ ವರ್ಗ | ಪ್ರತಿನಿಧಿತ್ವ ಶೇಕಡಾವಾರು |
|---|---|---|---|---|
| ಗ್ರೂಪ್ A | 1,572 | 13.10% | 350 | 2.92% |
| ಗ್ರೂಪ್ B | 2,573 | 11.63% | 715 | 3.23% |
| ಗ್ರೂಪ್ C | 42,409 | 13.50% | 12,379 | 3.94% |
| ಗ್ರೂಪ್ D | 16,268 | 21.57% | 3,733 | 4.95% |

ಗ್ರೂಪ್ 'ಡಿ'ನಲ್ಲಿ ಮಾತ್ರ ಪರಿಶಿಷ್ಟ ಜಾತಿ, ವರ್ಗದವರಿಗೆ ಸರಿಯಾದ ಪ್ರಾತಿನಿಧಿತ್ವವನ್ನು ನೀಡಲಾಗಿದೆ. ಈ ಕೆಲಸಗಳು ಕೆಳದರ್ಜೆಯ ಕೆಲಸಗಳೇ ಆಗಿರುತ್ತವೆ. ರಾಜ್ಯದ ಸೇವೆಗಳಲ್ಲಿ ಮಹಿಳೆಯರು 25%ಗಿಂತ ಹೆಚ್ಚು ಇರುವುದಿಲ್ಲ.

ನ್ಯಾಯಾಂಗದಲ್ಲಿ ಪರಿಶಿಷ್ಟ ಜಾತಿ/ವರ್ಗದವರಿಗಿರುವ ಮೀಸಲಾತಿ

ಕರ್ನಾಟಕದಲ್ಲಿ ಪರಿಶಿಷ್ಟ ಜಾತಿ/ವರ್ಗದವರ ಅಸೆಂಬ್ಲಿಯಲ್ಲಿನ ಪ್ರಾತಿನಿಧಿತ್ವದ ಪ್ರಮಾಣವನ್ನು ಪಂಚಾಯತಿಗಳೊಂದಿಗೆ ಕೊಡಲಾಗಿದೆ.

| Year | 1952 | 1957 | 1962 | 1972 | 1978 | 1983 | 1985 |
|---|---|---|---|---|---|---|---|
| No. Seat get | 20 | 24 | 22 | 25 | 39 | 38 | 39 |
| % of | 16 | 16.0 | 17 | 13.5 | 17.3 | 16.9 | 15.3 |
| ಪ್ರತಿನಿಧಿತ್ವ | 5 | 0 | 0 | 4 | 0 | 5 | |

| | Year 1989 | Year 1994 |
|---|---|---|
| No. of Seat | 35 | 41 |
| % of | 15.3 | 14.1 |
| ಪ್ರತಿನಿಧಿತ್ವ | 5 | 7 |

ಇತ್ತೀಚಿನ ಕರ್ನಾಟಕದ ಚುನಾವಣೆಯಲ್ಲಿ 6 ಜನ ಮಹಿಳಾ M.L.A.ಗಳು ಮಾತ್ರ ಆಯ್ಕೆಯಾದರು.

| ಪಂಚಾಯತ್ | ಸ್ಥಾನಗಳು | ಪರಿಶಿಷ್ಟ ಜಾತಿ | ಪರಿಶಿಷ್ಟ ವರ್ಗ |
|---|---|---|---|
| ಗ್ರಾಮ | 80,631 | 17,806 (7386) | 7,562 (5932) |
| ತಾಲೂಕ್ | 3,340 | 678 (277) | 248 (183) |
| ಜಿಲ್ಲಾ | 909 | 179 (67) | 57 (26) |

(ಈ ಚಿತ್ರದ ಬ್ರಾಕೆಟ್‌ನಲ್ಲಿ ಇರುವವು ಹೆಂಗಸರಿಗೆ ಮೀಸಲಾತಿ ಸೀಟುಗಳನ್ನು ತೋರಿಸುತ್ತವೆ)

1983ರ ಅಧ್ಯಯನದ ಪ್ರಕಾರ ಪಂಚಾಯಿತಿ ಆ್ಯಕ್ಟ್ ಗ್ರಾಮೀಣ ಪ್ರದೇಶಗಳ ಅಧಿಕಾರವನ್ನು ಹಾಗೂ ಅದರ ನಾಯಕತ್ವದಲ್ಲಿ ಅಂತಹ ಬದಲಾವಣೆಯನ್ನೇನೂ ತರಲಿಲ್ಲ. ಏಕೆಂದರೆ ಪೂರ್ಣ ಅಧಿಕಾರವು ಹೆಚ್ಚು ಆದಾಯವುಳ್ಳ, ಭೂಮಿಯುಳ್ಳ ಹಾಗೂ ಪ್ರಭುತ್ವ ಉಳ್ಳ ಜಾತಿ-ವರ್ಗಗಳ ಕೈಯಲ್ಲಿಯೇ ಇದ್ದುದರಿಂದ ನಾಯಕತ್ವದಲ್ಲಿ ಹೆಚ್ಚಿನ ಬದಲಾವಣೆಯೇನೂ ನಿರೀಕ್ಷಿಸಲಾಗಲಿಲ್ಲ.

ಒಂದು ಅಧ್ಯಯನದ ಪ್ರಕಾರ ಕಳೆದ ಪಂಚಾಯತಿ ಚುನಾವಣೆ 1239 ಸೀಟ್ ಮೀಸಲಾತಿಗಳಿದ್ದರೂ ಎಸ್.ಸಿ./ಎಸ್.ಟಿ./ ಓ.ಬಿ.ಸಿ.ಗಳಿಂದ ಯಾವ ಮಹಿಳೆಯೂ ಭಾಗವಹಿಸಿರಲಿಲ್ಲ. ಇನ್ನೊಂದು ಮುಖ್ಯವಾದ ವಿಚಾರವೆಂದರೆ ಮಹಿಳೆಯರು ಮೀಸಲಾತಿ 33% ಇದ್ದಾಗ್ಯೂ ಕೂಡಾ 44.6% ಪ್ರಾತಿನಿಧಿತ್ವವನ್ನು ಗ್ರಾಮ, ತಾಲ್ಲೂಕು ಮತ್ತು ಜಿಲ್ಲಾ ಪಂಚಾಯತಿಗಳಲ್ಲಿ ಪಡೆಯುವ ಸಾಧ್ಯತೆ ಇತ್ತು.

ಜೊತೆಗೆ ಪಂಚಾಯತ್ ರಾಜ್ಯ ವ್ಯವಸ್ಥೆ, ವರ್ಗಗಳಿಗೆ ಬಲ ನೀಡಿರುವುದಲ್ಲದೇ ಒಂದು ರೀತಿಯ ಸ್ಪೇಸ್ ಒದಗಿಸಿವೆ. ಪರಿಶಿಷ್ಟ ಜಾತಿ/ವರ್ಗದ ಮಹಿಳೆಯರು ಪಂಚಾಯಿತಿ ಮೆಟ್ಟಿಲನ್ನು ಹತ್ತುವಂತಾದುದು, ಇಡಿಯ ವ್ಯವಸ್ಥೆಯನ್ನು ಪ್ರವೇಶಿಸುವಂತಾದುದು ಪಂಚಾಯತ್ ರಾಜ್ಯ ವ್ಯವಸ್ಥೆಯಿಂದ. ಪಂಚಾಯತ್ ರಾಜ್ಯದ ವ್ಯವಸ್ಥೆಯು ಪಿತೃಪ್ರಾಧಾನ್ಯತೆ ಹಾಗೂ ಬಂಡವಾಳಶಾಹಿತ್ವದ ಗುಣವೆರಡನ್ನೂ ಒಳಗೊಂಡು ಕೆಲಸ ಮಾಡುತ್ತಿದೆ.

ಕರ್ನಾಟಕದ ಮೀಸಲಾತಿಯನ್ನು ಗಮನಿಸಿದಾಗ ಮೀಸಲಾತಿಯ ನಿಜವಾದ ಉದ್ದೇಶ ಈಡೇರಿಲ್ಲವೆಂಬುದನ್ನು ಗಮನಿಸ ಬಹುದಾಗಿದೆ. ಮೀಸಲಾತಿಯು ಯಾವಾಗಲೂ ಪ್ರಭಾವಿತ ವ್ಯಕ್ತಿಗಳ ಕೈಯಲ್ಲಿ ಒಂದು ಅಸ್ತ್ರವಾಗಿದೆ.

## ಮಹಿಳಾ ಮೀಸಲಾತಿ ಮಸೂದೆ ಕರ್ನಾಟಕದಲ್ಲಿ ಚರ್ಚೆಗಳು

ಕರ್ನಾಟಕದಲ್ಲಿ ಅನೇಕ ಮಹಿಳಾ ಗುಂಪುಗಳು ಪಂಚಾಯತಿ ಹಾಗೂ ಚುನಾವಣಾ ರಾಜಕೀಯದಲ್ಲಿ ತಮ್ಮ ಅನುಭವಗಳ ಹಿನ್ನೆಲೆಯಲ್ಲಿ ಮಹಿಳಾ ಮೀಸಲಾತಿ ಮಸೂದೆಯ ಬಗ್ಗೆ ತಮ್ಮ ಅಭಿಪ್ರಾಯ, ದೃಷ್ಟಿಕೋನಗಳನ್ನು ವ್ಯಕ್ತಪಡಿಸಿವೆ. ಜನವಾದಿ ಮಹಿಳಾ ಸಂಘಟನೆಯ ಪ್ರಕಾರ 33% ಮೀಸಲಾತಿಯಲ್ಲಿ ಅನೇಕ ಮಿತಿಗಳಿವೆ. ಆದಾಗ್ಯೂ ಇದು ಸ್ವಾಗತಾರ್ಹ: ಕುಟುಂಬ ಹಾಳಾಗುತ್ತವೆ, ಮೇಲ್ಜಾತಿ ಮಹಿಳೆಯರು ಸಾಕಷ್ಟು ಸದವಕಾಶಗಳನ್ನು ಹೊಂದುತ್ತಾರೆ, ಸರಿಯಾದ ಸ್ಪರ್ಧಿಗಳೇ ಸಿಕ್ಕುವುದಿಲ್ಲ ಈ ರೀತಿಯ ಟೀಕೆಗಳನ್ನು ಸದ್ಯಕ್ಕೆ ನಿರ್ಲಕ್ಷಿಸಬೇಕು, ಏಕೆಂದರೆ ಬದಲಾವಣೆ ಒಂದು ರಾತ್ರಿಯಲ್ಲಿ ನಡೆಯುವುದಿಲ್ಲ. ಬರುವ ವರ್ಷಗಳಲ್ಲಿ ಮೀಸಲಾತಿಯಿಂದಾಗಿ ಅನೇಕ ಮಹಿಳೆಯರು ಒಂದು ಶಕ್ತಿಯಾಗಿ ರೂಪಗೊಳ್ಳಬಹುದೆಂದು ಜನವಾದಿ ಮಹಿಳಾ ಸಂಘಟನೆ ಅಭಿಪ್ರಾಯ ಪಡುತ್ತದೆ.

ವಕೀಲರಾಗಿರುವ ಹೇಮಲತಾ ಮಹಿಷಿಯವರೂ ಇದನ್ನೇ ಹೇಳುತ್ತಾರೆ. ಹೆಚ್ಚು ಹೆಚ್ಚು ಮಹಿಳೆಯರು ರಾಜಕೀಯಕ್ಕೆ ಬಂದರೆ ರಾಜಕೀಯದ ವ್ಯಾಖ್ಯಾನವೇ ಬರುವ ವರ್ಷಗಳಲ್ಲಿ ಬದಲಾವಣೆಯಾಗಬಹುದು. ಮೀಸಲಾತಿ ಕೇವಲ ಅವಕಾಶವಾಗಿ ಮಾತ್ರ ಉಳಿಯಬಾರದು. ಇದು ಮಹಿಳಾ ನಾಯಕತ್ವವನ್ನೂ ಬೆಳೆಸಬೇಕು. ಹಿಂದುಳಿದ ಇತರ ವರ್ಗಗಳಿಗೆ ಮೀಸಲಾತಿ ಬೇಕೆನ್ನುವುದು ಮಹಿಳಾ ಮಸೂದೆಯನ್ನು ಪಾಸಾಗದಿರುವಂತೆ ತಡೆಯುವುದಕ್ಕಾಗಿ ಹುಟ್ಟಿಸಿರುವ ವಿವಾದವೆಂದು ಇವರು ಭಾವಿಸುತ್ತಾರೆ. ಉಳಿದ 67%ನಲ್ಲಿ ಇವರು ಹಿಂದುಳಿದ ವರ್ಗಗಳಿಗೆ ಮೀಸಲಾತಿ ನೀಡುತ್ತಾರೆಯೇ? ಮೀಸಲಾತಿ ಇಲ್ಲದೆಯೆ ಇತರ ಹಿಂದುಳಿದ ವರ್ಗಗಳಿಗೆ ಅನೇಕ ಸ್ಥಾನಗಳು ಲಭಿಸಿರುವಾಗ ಮಹಿಳಾ ಮೀಸಲಾತಿಯಲ್ಲಿ OBC ಮೀಸಲಾತಿಯೇಕೆ? ಹಿಂದುಳಿದ ವರ್ಗದವರ ಅಥವಾ ಅವರ ರಾಜಕೀಯ ಪ್ರವೇಶಕ್ಕಾಗಲೀ ಹೇಮಲತಾರವರ ವಿರೋಧವಿಲ್ಲ. ಎಲ್ಲಾ ಜಾತಿ/ವರ್ಗದ ಸಾಮರ್ಥ್ಯವುಳ್ಳ ಮಹಿಳೆಯರು ತಮ್ಮ ಜನರನ್ನು ಪ್ರತಿನಿಧಿಸುವಂತಾಗಬೇಕು ಎಂಬುದು ಅವರ ಅನ್ನಿಸಿಕೆ.

ದಲಿತ ಗುಂಪುಗಳು ಬಲವಾಗಿ 50% ಮೀಸಲಾತಿಯನ್ನೇ ಮಹಿಳೆಯರಿಗೆ ನೀಡಬೇಕು ಎಂದು ವಾದಿಸುತ್ತಾರೆ. 50% ಮೀಸಲಾತಿ ಇದ್ದಾಗ ಇದರಲ್ಲಿ ಇತರ ಹಿಂದುಳಿದ ವರ್ಗಗಳ ಮಹಿಳೆಯರಿಗೂ ಅವಕಾಶವಾಗುತ್ತದೆ ಎನ್ನುತ್ತಾರೆ. ಓ.ಬಿ.ಸಿ. ಮೀಸಲಾತಿ ಇಲ್ಲದೇ ಮಹಿಳಾ ಮೀಸಲಾತಿ ಮಸೂದೆ ಜಾರಿಗೆ ಬರಲೇಕೂಡದು ಎನ್ನುವುದು ಇವರ ಒತ್ತಾಯ.

ಪರಿಶಿಷ್ಟ ಜಾತಿಗೆ ಸೇರಿದ ಬ್ಯಾಂಕಿನ ಮಹಿಳೆಯೋರ್ವರ ಪ್ರಕಾರ 33% ಮೀಸಲಾತಿ ಮಹಿಳೆಯರಿಗೆ ಅವರ ಸಾಮರ್ಥ್ಯವನ್ನು ನಿರೂಪಿಸಲು ಅವಕಾಶವನ್ನು ಖಂಡಿತವಾಗಿಯೂ ನೀಡುತ್ತದೆ. ಅವರು ಉತ್ತಮ ರಾಜಕೀಯ ಸಂಘಟನೆಗಳನ್ನು ರೂಪಿಸಲು ತಮ್ಮ ಧ್ವನಿ ಎತ್ತುತ್ತಾರೆ. ಮೇಲ್ವರ್ಗಕ್ಕೆ ಸೇರಿದ ಜಾತಿಯ/ವರ್ಗದ ಮಹಿಳೆಯರು ಎಲ್ಲಾ ಅವಕಾಶಗಳನ್ನು ಕಬಳಿಸಬಾರದು. ಪರಿಶಿಷ್ಟ ಜಾತಿ/ವರ್ಗದ ಮಹಿಳೆಯರು ಈಗಾಗಲೇ ಮೀಸಲಾತಿ ಹೊಂದಿರುವುದರಿಂದ ಓ.ಬಿ.ಸಿ. ಮಹಿಳೆಯರಿಗೂ ಕೂಡಾ ಮೀಸಲಾತಿ ಇರಬೇಕು.

ಇನ್ನೋರ್ವ ಪರಿಶಿಷ್ಟ ಜಾತಿಗೆ ಸೇರಿದ ಹಾಗೂ ಬ್ಯಾಂಕೊಂದರಲ್ಲಿ ಕೆಲಸ ಮಾಡುವ ಮಹಿಳೆಯ ಪ್ರಕಾರ, ಮೀಸಲಾತಿಯನ್ನು ಬೇರೆಯವರು ದುರುಪಯೋಗ ಪಡಿಸಿಕೊಳ್ಳುತ್ತಿದ್ದಾರೆ. ಇದಕ್ಕಾಗಿ ಸುಳ್ಳು ಸರ್ಟಿಫಿಕೇಟ್‌ಗಳನ್ನು ಪಡೆದುಕೊಂಡು ಲಾಭವನ್ನು ಪಡೆದುಕೊಳ್ಳುತ್ತಿದ್ದಾರೆ. ಖಾಸಗೀಕರಣ ಹಾಗೂ ಜಾಗತೀಕರಣದ ಹಂತದಲ್ಲಿ ಸರ್ಕಾರವು ಜವಾಬ್ದಾರಿಯುತ ಪಾತ್ರವನ್ನು ವಹಿಸಬೇಕಾಗಿದೆ. ಸಾಮಾಜಿಕ ನ್ಯಾಯವನ್ನು ದೊರಕಿಸಬೇಕಾಗಿದೆ. ಖಾಸಗೀಕರಣದಿಂದಾಗಿ ಸರ್ಕಾರದ ಪಾತ್ರವು ಅಮುಖ್ಯವಾಗುತ್ತಿದ್ದು, ಇದರಿಂದ ಪರಿಶಿಷ್ಟ ಜಾತಿ/ವರ್ಗದವರ ಅಭಿವೃದ್ಧಿ ಕುಂಠಿತವಾಗುತ್ತಿದೆ. ಮಹಿಳೆಯರಿಗೆ ಮೀಸಲಾತಿ ಬೇಕು. ಓ.ಬಿ.ಸಿ.ಯವರಿಗೆ ಅವರ ಸಂಖ್ಯೆಯ ಆಧಾರದ ಮೇಲೆ ಮೀಸಲಾತಿ ನೀಡಬೇಕು. ಮಹಿಳಾ ಮೀಸಲಾತಿ ಮಸೂದೆಯು ಓ.ಬಿ.ಸಿ. ಮೀಸಲಾತಿ ಒಳಗೊಂಡೇ ಪಾಸ್ ಆಗಬೇಕು ಎಂಬುದು ಇವರ ಅಭಿಪ್ರಾಯ.

ಪರಿಶಿಷ್ಟ ಜಾತಿಗೆ ಸೇರಿದ ಕೆ.ಎ.ಎಸ್. ಅಧಿಕಾರಿಯೊಬ್ಬರ ಪ್ರಕಾರ ಮೀಸಲಾತಿಯ ಸವಲತ್ತುಗಳು ತಲುಪಬೇಕಾದವರನ್ನು, ಅಗತ್ಯವಿದ್ದವರನ್ನು ತಲುಪುವ ತನಕ ಮುಂದುವರಿಯಬೇಕು. ಸಾಮಾಜಿಕ ನ್ಯಾಯ ಸಾಧಿಸಲು ಮೀಸಲಾತಿ ಹಾಗೂ ಅಂತರ್‌ಜಾತಿಯ ವಿವಾಹಗಳು ಮುಖ್ಯ. 33% ಮೀಸಲಾತಿ ಸ್ವಾಗತಾರ್ಹ. ಜನಸಂಖ್ಯೆಯ ಆಧಾರದ ಮೇಲೆ ಓ.ಬಿ.ಸಿ.ಯವರಿಗೆ ಮೀಸಲಾತಿ ನೀಡಬೇಕು. ಈ ಮೀಸಲಾತಿಯನ್ನೊಳಗೊಂಡೇ ಮಹಿಳಾ ಮೀಸಲಾತಿ ಜಾರಿಗೆ ಬರಬೇಕು.

ಹೆಸರಾಂತ ಪತ್ರಿಕೋದ್ಯಮಿ ಡಾ. ವಿಜಯಮ್ಮನವರ ಪ್ರಕಾರ ಮೀಸಲಾತಿಯು ಸ್ವಾಗತಾರ್ಹ. ಓ.ಬಿ.ಸಿ. ಮೀಸಲಾತಿಯ

ವಿವಾದವನ್ನು ನಾವು ಚರ್ಚಿಸಬೇಕಿದೆ. ಓ.ಬಿ.ಸಿ. ಮೀಸಲಾತಿಯನ್ನು ಇಂದು ತಮ್ಮ ಹಿತಾಸಕ್ತಿಗಳಿಗಾಗಿ ಕೆಲವರು ಬಳಸಿಕೊಳ್ಳುತ್ತಿದ್ದಾರೆ. ಓ.ಬಿ.ಸಿ. ಮಹಿಳೆಯರಿಗೆ ಅವರ ಶೇರ್ ಅವರಿಗೆ ಸಿಗಬೇಕು. ಮೀಸಲಾತಿಯ ಸವಲತ್ತುಗಳು ಕೇವಲ ಮೇಲ್ವರ್ಗ/ಮೇಲ್ಜಾತಿ ವಿದ್ಯಾವಂತೆ ಹೆಂಗಸರಿಗೆ ಮಾತ್ರ ತಲುಪಬಾರದು. ಮಹಿಳಾ ಬಿಲ್ ಜಾರಿಗೆ ಬರಬೇಕು ಹಾಗೂ ನಿರ್ದಿಷ್ಟ ಸಮಯದೊಳಗೆ. ಉದಾ : 5 ವರ್ಷದೊಳಗೆ ಕಮಿಟಿಯೊಂದು ಓ.ಬಿ.ಸಿ. ಮಹಿಳೆಯರಿಗೆ ಸರಿಯಾದ ಅವಕಾಶ ಸಿಗುವುದನ್ನು ದೃಢಪಡಿಸಬೇಕು. ಇದು ಬಹಳ ಮುಖ್ಯ, ಇಲ್ಲವಾದರೆ ಮೇಲ್ವರ್ಗದ ಜಾತಿ/ವರ್ಗದ ಮಹಿಳೆಯರು ಮಾತ್ರ, ಶಿಕ್ಷಣವಂತರು ಮಾತ್ರ ರಾಜಕೀಯವನ್ನು ಪ್ರವೇಶಿಸುತ್ತಾರೆ.

ಹಿಂದುಳಿದ ಜಾತಿ ಹಾಗೂ ವರ್ಗಗಳ ಕಮಿಟಿಯ ಅಧ್ಯಕ್ಷರಾಗಿರುವ ಪ್ರೊ. ರವಿವರ್ಮ ಕುಮಾರ್‌ರವರ ಪ್ರಕಾರ ಮಹಿಳಾ ಮೀಸಲಾತಿಯು ಕೆಳಗಿನ ಅಂಶಗಳನ್ನೊಳಗೊಂಡು ಜಾರಿಗೆ ಬರಬೇಕು. ಇದರಿಂದ ವಿವಾದಗಳನ್ನು ತಡೆಗಟ್ಟಬಹುದಾಗಿದೆ.

1) ಪಾರ್ಲಿಮೆಂಟ್ ಹಾಗೂ ವಿಧಾನಸೌಧದ ಸದಸ್ಯತ್ವವು ಎರಡು ಟರ್ಮಗಳಿಗೆ ಮಾತ್ರವಿರಬೇಕು.

2) ಪ್ರತಿ ರಾಜಕೀಯ ಪಕ್ಷವು 1/3 ಸ್ಥಾನಗಳನ್ನು ಮಹಿಳೆಯರಿಗೆ ಮೀಸಲಿಡಬೇಕು.

3) ಮೀಸಲು ಕ್ಷೇತ್ರವು 2ನೆಯ ಬಾರಿಗೆ ಮೀಸಲ್ಜಾತಿ ಕ್ಷೇತ್ರವಾಗಬಾರದು.

ಮೀಸಲಾತಿಯೊಳಗೆ ಓ.ಬಿ.ಸಿ. ಮಹಿಳೆಯರಿಗೆ ಮೀಸಲಾತಿ ನೀಡಬೇಕು. ಮಂಡಲ್ ಕಮಿಷನ್ ಜನಸಂಖ್ಯೆಯ 50% ಸಾಮಾಜಿಕವಾಗಿ ಹಾಗೂ ಶೈಕ್ಷಣಿಕವಾಗಿ ಹಿಂದುಳಿದಿದ್ದಾರೆ ಎಂದು ಗುರುತಿಸಿದೆ. ಪ್ರಜಾಪ್ರಭುತ್ವ ಯಶಸ್ವಿಯಾಗಬೇಕಾದರೆ ಎಲ್ಲಾ ಹಿಂದುಳಿದ ವರ್ಗ/ಜಾತಿಯವರು ರಾಜಕೀಯದಲ್ಲಿ ಭಾಗವಹಿಸುವಂತಾಗಬೇಕು.

'ಮಾನಿನಿಯ' - (ಒಂದು ಮಹಿಳಾ ಗುಂಪು) ಪ್ರಕಾರ ಮಹಿಳಾ ಚಳುವಳಿ ಹಾಗೂ ಚುನಾವಣಾ ರಾಜಕೀಯದ ಮಧ್ಯೆ ಅರ್ಥಪೂರ್ಣ ಸಂಬಂಧವನ್ನು ಏರ್ಪಡಿಸಲು 'ಮೀಸಲಾತಿ' ಒಂದು ಮುಖ್ಯ ಸಂಗತಿ. ಅವರ ಪ್ರಕಾರ ಹೊಸ ಹೊಸ ಸ್ಟ್ರ್ಯಾಟಜಿಗಳ ಮೂಲಕ ಈ ಸಂಬಂಧವನ್ನು ಏರ್ಪಡಿಸಬೇಕು. ಓ.ಬಿ.ಸಿ. ಮಹಿಳೆಯರಿಗೆ ಅವರ ಶೇರ್ ಸಿಕ್ಕಬೇಕು. ಆದರೆ ಇದಕ್ಕೆ ಮಹಿಳಾ ಮಸೂದೆ ಜಾರಿಯಾಗುವುದು ನಿಲ್ಲಬಾರದು. ಆನಂತರ ಪಂಚಾಯಿತಿಯೂ ಆದ ಹಾಗೆ ಸುಧಾರಣೆಗಳು ಆಗಬಹುದು.

1998ರಲ್ಲಿ ಜನವಾದಿ ಮಹಿಳಾ ಗುಂಪು, ಮಹಿಳಾ ಶಕ್ತಿ ಸಂಘಟನೆ, ಸುಮಂಗಲಿ ಸೇವಾಶ್ರಮ, ವರ್ಕಿಂಗ್ ವಿಮೆನ್ಸ್ ಸಮನ್ವಯ ಸಮಿತಿ, ಮಹಿಳಾ ದಕ್ಷತಾ ಸಮಿತಿ, ಆಲ್ ಇಂಡಿಯಾ ವಿಮೆನ್ಸ್ ಕಾನ್‌ಫರೆನ್ಸ್, ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ, ವೈ.ಎಂ.ಸಿ.ಎ. ಈ ಗುಂಪುಗಳು ಒಟ್ಟಾಗಿ ಚುನಾವಣಾ ರಾಜಕೀಯದ ಬಗ್ಗೆ ಒಂದು ಸೆಮಿನಾರನ್ನೂ ಏರ್ಪಡಿಸಿದ್ದವು. ಇವರು ಸ್ಪರ್ಧಿಗಳಿಗೆ ಹಾಗೂ ರಾಜಕೀಯ ಪಕ್ಷಗಳ ಮುಂದೆ ಹಲವಾರು ಬೇಡಿಕೆಯನ್ನಿತ್ತರು. 33% ಮೀಸಲಾತಿಯ ಬಗ್ಗೆ ಸ್ಪರ್ಧಿಗಳು ಕಾಳಜಿ ಹೊಂದಿರಬೇಕಲ್ಲದೇ ಗೆದ್ದು ಬಂದಾಗ ಅದಕ್ಕೆ ಹೆಚ್ಚು ಆದ್ಯತೆ ನೀಡಬೇಕು ಎಂದು ಅಭಿಪ್ರಾಯಪಟ್ಟರು. ರಾಜಕೀಯ ಪಕ್ಷಗಳು ಮಹಿಳಾ ಸಮಸ್ಯೆಗಳನ್ನು ಕೈಗೆತ್ತಿಕೊಂಡು ಮಹಿಳಾ ರಾಜಕೀಯ ಭಾಗವಹಿಸುವಿಕೆಯನ್ನು ಬೆಂಬಲಿಸಬೇಕು ಎಂಬ ಬೇಡಿಕೆಯನ್ನು ಮಂಡಿಸಿದರು. ರಾಜನೀತಿ, ಕೌಟುಂಬಿಕ ಹಿಂಸೆಯನ್ನು ನಿಲ್ಲಿಸಬೇಕಲ್ಲದೇ ಮಹಿಳೆಯರನ್ನು ಮಾಧ್ಯಮದಲ್ಲಿ ಕೆಟ್ಟದ್ದಾಗಿ ಚಿತ್ರಿಸುವುದನ್ನು ನಿಲ್ಲಿಸಬೇಕು ಎಂಬ ಬೇಡಿಕೆಗಳನ್ನು ಮಂಡಿಸಿದರು.

'ಸರ್ಚ್' - (ಸರ್ಕಾರೇತರ ಗುಂಪು) ಪಂಚಾಯತಿಯಲ್ಲಿನ ಮಹಿಳೆಯರಿಗೆ ತರಬೇತಿ ನೀಡುತ್ತಾ ಇದೆ. ಅವರು 11,000 ಮಹಿಳೆಯರಿಗೆ ವಿಶೇಷ ತರಬೇತಿ ನೀಡಿ ಪಂಚಾಯತಿಯಲ್ಲಿ ಭಾಗವಹಿಸುವಂತೆ ಮಾಡುತ್ತಿದ್ದಾರೆ. ಪಂಚಾಯತಿಯಲ್ಲಿ ಸಮರ್ಥವಾಗಿ ಕೆಲಸ ನಿರ್ವಹಿಸಿದ ಮಹಿಳೆಯರ ವರದಿಗಳನ್ನು ಇವರು ಪ್ರಕಟಿಸಿದ್ದಾರೆ. ಅವರ ಪ್ರಕಾರ 33% ಮೀಸಲಾತಿಯಿಂದಾಗಿ ಹಲವಾರು ವರ್ಷಗಳಲ್ಲಿ ಮಹಿಳೆಯರು ರಾಜಕೀಕರಣಗೊಳ್ಳುವುದಲ್ಲದೇ ರಾಜಕೀಯವನ್ನು ಮರು ವ್ಯಾಖ್ಯಾನಿಸುವ ಒಂದು ಶಕ್ತಿಯಾಗುತ್ತಾರೆ ಎನ್ನುತ್ತಾರೆ.

'ವಿಮೋಚನ' - (ಮಹಿಳಾ ಹಕ್ಕುಗಳ ಗುಂಪು) ನೇರವಾಗಿ ಚುನಾವಣಾ ರಾಜಕೀಯದಲ್ಲಿ ಭಾಗವಹಿಸಿಲ್ಲ. ಆದಾಗ್ಯೂ ಮತದಾರರಲ್ಲಿ ಪ್ರಜ್ಞೆ ಮೂಡಿಸುವಲ್ಲಿ, ಚುನಾವಣಾ ಪ್ರಣಾಳಿಕೆಯನ್ನು ಟೀಕಿಸುವಲ್ಲಿ, ಮಹಿಳೆಯರಿಗಾಗಿರುವ ಯೋಜನಾ, ಅಭಿವೃದ್ಧಿ ಸ್ಕೀಮ್‌ಗಳನ್ನು ಪ್ರಶ್ನಿಸುವಲ್ಲಿ ಇವರು ಸಕ್ರಿಯ ಪಾತ್ರ ವಹಿಸಿದ್ದಾರೆ. ಹೆಂಗಸರ ವಿರುದ್ಧ ಹಿಂಸೆ ಮಾಡಿದ ರಾಜಕಾರಣಿಗಳನ್ನು ಇವರು ಅನೇಕ ರೀತಿಯಲ್ಲಿ ವಿರೋಧಿಸಿದ್ದಾರೆ. ಚುನಾವಣಾ ರಾಜಕೀಯದಲ್ಲಿ ಭಾಗವಹಿಸುವ ಮೂಲಕ ತಮ್ಮ ರಾಜಕೀಯವನ್ನು ಅಭಿವ್ಯಕ್ತಿಸುವುದು ಅಸಾಧ್ಯ ಎನ್ನುವುದು ಅವರ ಅಭಿಪ್ರಾಯ. ಆದಾಗ್ಯೂ, ಕೆಲವು ಸಂದರ್ಭದಲ್ಲಿ ಈ ಹಂತದಲ್ಲಿನ ಅವರ ಪ್ರಯತ್ನಗಳು ರಾಜಕಾರಣಿಗಳ

ಜೊತೆ ಸಂವಾದ ನಡೆಸುವುದಕ್ಕೆ, ಸಾರ್ವಜನಿಕವಾಗಿ, ರಾಜಕೀಯ ಪಕ್ಷಗಳೊಡನೆ, ರಾಜಕೀಯ ಗುಂಪುಗಳೊಡನೆ ಕೆಲಸ ಮಾಡುವುದಕ್ಕೆ ಸಹಾಯ ಮಾಡಿವೆ. ಮೀಸಲಾತಿ ಇದ್ದರೂ, ಈಗಿರುವ ರಾಜಕೀಯ ಹಾಗೂ ಅದರ ಕೋ ಆಪ್ಷನ್‌ನಲ್ಲಿ ಮಹಿಳೆಯರಿಗೆ ಕೆಲಸ ಮಾಡುವ ಅವಕಾಶ ದಕ್ಕಲಾರದು. ಮಹಿಳಾ ಸಂಖ್ಯೆ ಹೆಚ್ಚಾದಂತೆ, ಮಹಿಳೆಯರು ಒಂದು ಶಕ್ತಿಯಾಗಿ ರೂಪುಗೊಳ್ಳಬಹುದು. ಆದರೆ ಇದು ಸಂಪೂರ್ಣ ಬದಲಾವಣೆ ಅಲ್ಲ. ಜಾತಿ, ವರ್ಗ, ಧರ್ಮ ಎಲ್ಲವನ್ನೂ ವಿರೋಧಿಸುತ್ತವೆ. ವಿಮೋಚನ ಇಂದಿನ ರಾಜಕೀಯದಿಂದ ತಮ್ಮನ್ನು ಬೇರ್ಪಡಿಸಿಕೊಂಡು ನೋಡುವುದಿಲ್ಲ. ಈ ವ್ಯವಸ್ಥೆಯನ್ನು ಟೀಕಿಸುತ್ತಾರೆ, ಈ ವ್ಯವಸ್ಥೆಯಿಂದ ನೀಡಲಾದ ಸವಲತ್ತುಗಳನ್ನು ಮಹಿಳೆಯರ ಪ್ರಗತಿಯಾಗಿ ಬಳಸಿಕೊಳ್ಳಬೇಕು ಎಂಬುದು ಇವರ ಅಭಿಪ್ರಾಯ. 33% ಮೀಸಲಾತಿ ಮಾತ್ರ ಮಹಿಳೆಯರನ್ನು ರಾಜಕೀಯದಲ್ಲಿ ತೊಡಗಿಸುವುದಾಗಬಾರದು. ಅನೇಕ ಬದಲಾವಣೆಗಳನ್ನು ತರಲು ಇದು ಒಂದು ಅವಕಾಶ ಮಾತ್ರ. ಚುನಾವಣಾ ರಾಜಕೀಯಕ್ಕಿಂತ ತಮ್ಮ ರಾಜಕೀಯ ಅಭಿಪ್ರಾಯಗಳು, ದೃಷ್ಟಿಕೋನಗಳು ಆಳವಾದವು, ವಿಶಾಲವಾದವು ಎಂಬುದು ಇವರ ಅಭಿಪ್ರಾಯ. ರಾಜಕೀಯ ಪಕ್ಷಗಳು ಮೀಸಲಾತಿಯನ್ನು ರಾಜಕೀಯ ಫ್ರೇಂ ವರ್ಕ್ ಒಳಗೇ ನೋಡುತ್ತಾರೆ. ಹಾಗಾಗಿ ಅವರಿಗೆ ಮೀಸಲಾತಿ ಅತಿ ಮುಖ್ಯ ವಿಚಾರವಾಗುತ್ತದೆ. ವಿಮೋಚನ 'ಮೀಸಲಾತಿ'ಯನ್ನು ಒಂದು ಮುಖ್ಯ 'ಅಜೆಂಡಾ'ವನ್ನಾಗಿ ನೋಡುವುದಿಲ್ಲ.

ಮಹಿಳಾ ಜಾಗೃತಿಯ ಗೀತ ಮೆನನ್‌ರವರು ಕಾರ್ಪೊರೇಟರ್ ಸ್ಥಾನಕ್ಕೆ ಚುನಾವಣೆಯಲ್ಲಿ ಸ್ಪರ್ಧಿಸಿದ್ದರು. ಆಕೆ ಇಬ್ಬರು ಪುರುಷ ಸ್ಪರ್ಧಿಗಳನ್ನು ಎದುರಿಸಿದರು. ಒಬ್ಬರು ಕಾಂಗ್ರೆಸ್ಸಿನವರು ಮತ್ತೊಬ್ಬರು ಬಿ.ಜೆ.ಪಿ.ಯವರು. ಚುನಾವಣಾ ಪ್ರಚಾರದ ಸಮಯದಲ್ಲಿ ಗೀತಾಮೆನನ್‌ರವರ ಮೀಟಿಂಗ್‌ಗಳನ್ನು ಹಾಳುಮಾಡಲು ಅವರು ಪ್ರಯತ್ನಿಸಿದರು. ಆಕೆಯ ವಿರುದ್ಧ ಗಾಳಿಮಾತುಗಳನ್ನು ಹಬ್ಬಿಸಿದರು. ಅದು ಮೀಸಲಾತಿ ಕ್ಷೇತ್ರವಲ್ಲವಾದ್ದರಿಂದ, ಆಕೆ ಜನರಲ್ ವಾರ್ಡ್‌ನಲ್ಲಿ ಯಾಕೆ ಸ್ಪರ್ಧಿಸಿದರು ಎಂಬುದು ಅವರ ಪ್ರಶ್ನೆಯಾಗಿತ್ತು. ಆಕೆಯ ವಿರುದ್ಧ ಸ್ಪರ್ಧಿಸಿದ್ದ ಇಬ್ಬರು ಅಭ್ಯರ್ಥಿಗಳು ರಾಜಕೀಯದಲ್ಲಿ ಭಾಗವಹಿಸುವುದಕ್ಕಿಂತ ಮನೆಗೆ ಹೋಗಿ ಅಡಿಗೆ ಮಾಡಿ ಎಂದು ಅವರಿಗೆ ಬುದ್ಧಿವಾದ ಹೇಳಿದರು. ಆಕೆ ಸ್ಪರ್ಧಿಸಿದ್ದ ಕ್ಷೇತ್ರದವರು ಆಕೆಯನ್ನು ಹೊರಗಿನವರು ಎಂಬೇ ಪರಿಗಣಿಸಿದರು. ಧರ್ಮ ಹಾಗೂ ಜಾತಿಯ ಆಧಾರದ ಮೇಲೆ ಮತಗಳನ್ನು ಹಾಕಲಾಗಿತ್ತು. ಮುಸ್ಲಿಂರ ಓಟುಗಳು ಇವರ ಪರವಾಗಿದ್ದವು. ಆಕೆ ಚುನಾವಣೆಯಲ್ಲಿ ಸೋತರು. ಆದರೆ ಚುನಾವಣೆಯ ಬಗ್ಗೆ ಹಲವಾರು ಪ್ರಶ್ನೆಯೆತ್ತಲು ಅವರಿಗೆ ಇದೊಂದು ವೇದಿಕೆಯಾಗಿತ್ತು.

ಮಹಿಳಾ ಮೀಸಲಾತಿ ಬಿಲ್ ಆಳುವ ಪಕ್ಷದ, ವರ್ಗದ ಒಂದು ಕಣ್ಣೊರೆಸುವ ಆಟ ಎನ್ನುತ್ತಾರೆ. ಈ ಮಹಿಳಾ ಮೀಸಲಾತಿ ಬಿಲ್ ಮಂಡಿಸಲೇಬೇಕಾದ ಒತ್ತಡ ಅವರಿಗಿದೆ. ಆದರೆ ಜನಪರ ಚಳುವಳಿಗೆ ಇದು ಪರ್ಯಾಯವಲ್ಲ. ಮಹಿಳಾ ಶಕ್ತಿಯ ಪ್ರಬಲಗೊಳಿಸುವಲ್ಲಿ ಇದೊಂದು ಹೆಜ್ಜೆ ಎಂದೇ ನಾವು ಮೀಸಲಾತಿಯನ್ನು ಸ್ವಾಗತಿಸಬೇಕಾಗಿದೆ ಎಂದು ಇವರು ಅಭಿಪ್ರಾಯಪಡುತ್ತಾರೆ. ಓ.ಬಿ.ಸಿ.ಯ ಪುರುಷರು ಮಹಿಳಾ ಮೀಸಲಾತಿ ಮಸೂದೆಗೆ ಸಂಪೂರ್ಣ ವಿರೋಧ ವ್ಯಕ್ತಪಡಿಸಿದ್ದಾರೆ. ಈ ವಿರೋಧ ಬರಿಯ ಮೀಸಲಾತಿ ಮಸೂದೆಯ ವಿರುದ್ಧ ಮಾತ್ರವಲ್ಲ, ಇದನ್ನು ತಮ್ಮ ಮಹಿಳೆಯರ ವಿರುದ್ಧವೇ ಬಳಸುತ್ತಿದ್ದಾರೆ. ಓ.ಬಿ.ಸಿ. ಪುರುಷರು ಈಗಾಗಲೇ ತಮ್ಮ ರಾಜಕೀಯ ಸ್ಥಾನವನ್ನು ಭದ್ರಪಡಿಸಿಕೊಂಡು, ಕ್ರೋಢೀಕರಿಸಿಕೊಂಡಿದ್ದಾರೆ. ಈ ಮೀಸಲಾತಿ ಇಲ್ಲದೆಯೇ ತಮ್ಮ ಮಹಿಳೆಯರನ್ನು ಅವರು ರಾಜಕೀಯದಲ್ಲಿ ಭಾಗವಹಿಸುವಂತೆ ಮಾಡಬಹುದು. ಆದರೆ ತಮ್ಮ ಹೆಂಗಸರು ಈಚೆ ಬಂದು ಕೆಲಸ ಮಾಡುವುದು ಅವರಿಗೆ ಇಷ್ಟವಿಲ್ಲ. ಓ.ಬಿ.ಸಿ. ಮಹಿಳೆಯರೆ ಈ ಬಗ್ಗೆ ಮಾತನಾಡಲಿ. ಅವರೇಕೆ ಮೌನವಾಗಿದ್ದಾರೆ? ಅವರು ಮಹಿಳಾ ಮೀಸಲಾತಿ ಮಸೂದೆ ಜಾರಿಗೆ ಬರಬೇಕು ಎನ್ನುತ್ತಾರೆ. ಆದರೆ ಈ ಮೀಸಲಾತಿ ಮಹಿಳಾ ಜಾಗೃತಿಗೆ ಒಂದು ಮುಖ್ಯ ಅಜೆಂಡ ಅಲ್ಲ. ಏಕೆಂದರೆ ಆಳುವ ವರ್ಗದ ಒಂದು ಕಣ್ಣೊರೆಸುವ ಆಟ ಎಂಬುದು ಗೀತಾ ಮೆನನ್‌ರವರ ಅಭಿಪ್ರಾಯ.

'ಮಾನಸ' - ಮಹಿಳಾ ಪತ್ರಿಕೆ, ಗುಂಪು ಇವರ ಪ್ರಕಾರ ಈಗ ಮೀಸಲಾತಿ ಜಾರಿಗೆ ಬರಬೇಕಾಗಿರುವುದು ರಾಜಕೀಯ ಪಕ್ಷಗಳಿಂದಲೇ. ಆದರೆ ಎಷ್ಟು ರಾಜಕೀಯ ಪಕ್ಷಗಳಿಗೆ ಮಹಿಳೆಯರನ್ನು ಚುನಾವಣೆಯಲ್ಲಿ ಸಕ್ರಿಯವಾಗಿ ತೊಡಗಿಸಬೇಕು ಎಂಬ ಇಚ್ಛಾ ಶಕ್ತಿ, ರಾಜಕೀಯ ಬದ್ಧತೆ ಇದೆ? ಎಷ್ಟು ರಾಜಕೀಯ ಪಕ್ಷಗಳು ಮಹಿಳೆಯರು ಸಮರ್ಥವಾಗಿ ಕಾರ್ಯ ನಿರ್ವಹಿಸಲು ಅಡಚಣೆಯಾಗಿರುವಂತಹ ಮನೆಗೆಲಸ ಅಥವಾ ಇಬ್ಬಗೆಯ ಹೊರೆಯ ಬಗ್ಗೆ ಹೋರಾಟ ನಡೆಸಬಲ್ಲವು? ಮೀಸಲಾತಿ ಒಂದು ಕಣ್ಣೊರೆಸುವ ತಂತ್ರ, ಮಹಿಳಾ ಧ್ವನಿ ಕಬಳಿಸುವ ಯತ್ನವಷ್ಟೆ. ಇದು ಸಾಂಕೇತಿಕ ಮಾತ್ರ. ಮಾನಸ ದೆಹಲಿಯ ಸಹೇಲಿ ಗುಂಪು ಹೇಳುವುದನ್ನು ಒಪ್ಪಿಕೊಳ್ಳುತ್ತದೆ. ಮೀಸಲಾತಿ ತಂತ್ರಗಳ ಒಂದು ಭಾಗವಷ್ಟೆ. ಪಾರ್ಲಿಮೆಂಟಿನ ಅಥವಾ ವಿಧಾನಸೌಧದ ಮಹಿಳಾ ಪ್ರತಿನಿಧಿಗಳು ಜನಪರ ಚಳುವಳಿಗಳಿಗೆ ಪ್ರತಿಕ್ರಿಯಿಸದಿದ್ದರೆ, ಯಾವ ಬದಲಾವಣೆಯೂ ಸಾಧ್ಯವಿಲ್ಲ. ಬೇಡಿಕೆಯು ಗ್ರ್ಯಾಸ್ ರೂಟ್ ಹಂತದಿಂದಲೇ ಬರಬೇಕು. ಆಗ ಅಧಿಕಾರದಲ್ಲಿರುವ ಮಹಿಳಾ ಪ್ರತಿನಿಧಿಗಳಿಂದ ಪ್ರಯೋಜನಗಳಾಗಬಹುದು. ಕೇವಲ ಮಹಿಳಾ ಪ್ರಾತಿನಿಧಿತ್ವ ಮಹಿಳಾ ಪ್ರಶ್ನೆಗಳನ್ನು ಕೈಗೆತ್ತಿಕೊಳ್ಳುತ್ತದೆ ಎಂದು ಹೇಳಲಾಗುವುದಿಲ್ಲ. ಪ್ರಭುತ್ವ ಮಹಿಳಾ ಚಳುವಳಿಗೆ ಬರಿಯ ತೋರಿಕೆಯ ಕರುಣೆ ತೋರಿಸುತ್ತದೆ ಎಂಬುದನ್ನು

ನಾವು ಅರಿತಿರಬೇಕು. ಸಮಾನತೆ ಅದರ ಉದ್ದೇಶವಲ್ಲ. ಮಾನಸದ ಪ್ರಕಾರ ಬರುವ ವರ್ಷಗಳು, ಮೀಸಲಾತಿಯಿಂದ ಮಹಿಳೆಯರು ಉಪಯೋಗ ಪಡೆಯಬಹುದಾಗಿದೆ. ಓ.ಬಿ.ಸಿ. ಮೀಸಲಾತಿಯ ಬಗ್ಗೆ 'ಮಾನಸ'ದಲ್ಲಿ ಎರಡು ಅಭಿಪ್ರಾಯಗಳಿವೆ. ಕೆಲವರು ಓ.ಬಿ.ಸಿ. ಮೀಸಲಾತಿಯನ್ನು ಈ ಸಂದರ್ಭದಲ್ಲಿ 'ವಿವಾದ'ವನ್ನಾಗಿ ಮಾಡಬಾರದು. ಏಕೆಂದರೆ ಇದು ಮಹಿಳಾ ಮೀಸಲಾತಿ ಮಸೂದೆ ಜಾರಿಗೆ ಬರುವುದಕ್ಕೇ ತೊಡಕಾಗುತ್ತದೆ. ಆದರೆ ಇನ್ನು ಕೆಲವರು ಜಾತಿ ಒಂದು ಸತ್ಯ. ಹಾಗಾಗಿ ಓ.ಬಿ.ಸಿ. ಮೀಸಲಾತಿ ಬೇರೇ ಬೇಕು ಎನ್ನುತ್ತಾರೆ. ಆದರೆ ಈ ಮೀಸಲಾತಿಯನ್ನು ಒಂದು ಮಹಿಳಾ ಮೀಸಲಾತಿ ಮಸೂದೆಗೆ ತಡೆಯೊಡ್ಡಲು ಒಂದು ಸಾಧನವನ್ನಾಗಿ ಬಳಸಬಾರದು.

ಈ ಮೇಲ್ಕಂಡ ಗುಂಪುಗಳ ಅನುಭವದ ಹಿನ್ನೆಲೆಯಲ್ಲಿ ಇವತ್ತು ಮೀಸಲಾತಿಗೆ ಸಂಬಂಧಿಸಿದಂತೆ ಮಹಿಳಾ ಚಳುವಳಿಯ ಮುಂದಿರುವ ಪ್ರಶ್ನೆಗಳಾವುವು?

1) 33% ಮೀಸಲಾತಿಯನ್ನು ಮಹಿಳಾ ಶಕ್ತಿಯನ್ನು ತರಲು ಬಳಸಿಕೊಳ್ಳಬೇಕೆನ್ನುವುದಲ್ಲ - ನಾವು ಇದನ್ನು ಹೇಗೆ ಮಾಡುತ್ತೇವೆ?

2) ಜಾತಿ ಚುನಾವಣೆಯಲ್ಲಿ ಬಹುಮುಖ್ಯ ಪಾತ್ರ ವಹಿಸುತ್ತದೆ. ನಾವು ಇಲ್ಲಿ ಜಾತಿ ಹಾಗೂ ಲಿಂಗಾಧಾರಿತ ಸಮಸ್ಯೆಗಳನ್ನು ಮೀರಿ ನೋಡಬೇಕೆಂಬುದನ್ನು ಹೇಗೆ ಮಾತನಾಡಬೇಕು?

3) ಅನೇಕ ಗುಂಪುಗಳು ಮೀಸಲಾತಿ ಮುಖ್ಯ ಅಜೆಂಡ ಅಲ್ಲ ಎನ್ನುತ್ತವೆ. ಆದಾಗ್ಯೂ ಮೀಸಲಾತಿಯಿಂದ 'ಮಹಿಳಾ ಶಕ್ತಿ' ರೂಪಿಸಬಹುದು ಎನ್ನುತ್ತೇವೆ. ನಾವು ನಮ್ಮ ಸಕ್ರಿಯತೆಯನ್ನು ಹೇಗೆ ಯೋಚಿಸುತ್ತೇವೆ?

4) ಚುನಾವಣಾ ರಾಜಕೀಯ ನಮ್ಮ 'ವಿಷನ್' ಅಲ್ಲವೆಂದು ನಾವು 'ಮೀಸಲಾತಿ' ಸಮಸ್ಯೆಯಿಂದ ದೂರ ಉಳಿಯಬೇಕೇ?

5) ಚುನಾವಣಾ ರಾಜಕೀಯ ಹಾಗೂ ಮಹಿಳಾ ಚಳುವಳಿಯ ಮಧ್ಯೆ ಇರಬೇಕಾದ ಸಂಬಂಧವೇನು?

6) ಮಹಿಳಾ ಸ್ಪರ್ಧಿಗಳು ಜವಾಬ್ದಾರಿದಾರರಾಗುವಂತೆ ಮಾಡುವಲ್ಲಿ ಮಹಿಳಾ ಗುಂಪುಗಳ ಸಕ್ರಿಯ ಮಧ್ಯ ಪ್ರವೇಶಿಕೆ ಅಗತ್ಯವಿಲ್ಲವೇ?

7) ಮಹಿಳಾ ಪ್ರತಿನಿಧಿಗಳು ಮಹಿಳೆಯರ ಆಸಕ್ತಿಗಳನ್ನು ಪ್ರತಿನಿಧಿಸುತ್ತಾರೆಂದು ನಾವು ಹೇಗೆ ದೃಢೀಕರಿಸುವುದು?

8) ಈಗಿರುವ ಮೀಸಲಾತಿಯನ್ನು ಹಾಗೆಯೇ ಒಪ್ಪಿಕೊಂಡರೆ, ನಾವು ನಂತರದಲ್ಲಿ ಬದಲಾವಣೆಗೆ ಹೇಗೆ ಲಾಬಿ ಮಾಡಿ ಓ.ಬಿ.ಸಿ. ಮಹಿಳೆಯರು ಹೆಚ್ಚು ಪ್ರಾತಿನಿಧ್ಯ ಪಡೆಯವಂತೆ ಮಾಡುತ್ತೇವೆ.

---

ಅಂಬೇಡ್ಕರ್‌ರವರು ಹಿಂದೂ ಡ್ರಾಫ್ಟ್ ಕೋಡ್‌ನ ಅಧ್ಯಕ್ಷರಾಗಿದ್ದರು. ಈ ಬಿಲ್ಲನ್ನು ಏಪ್ರಿಲ್ 1947ರ 11ರಂದು ಲೆಜಿಸ್ಲೇಟೀವ್ ಅಸೆಂಬ್ಲಿಯಲ್ಲಿ ಮಂಡಿಸಲಾಯಿತು. ಮಸೂದೆಯನ್ನು ಮತ್ತೆ 17ನೇ ಡಿಸೆಂಬರ್ 1947ರಂದು ಮಂಡಿಸಿದಾಗ ಅಂಬೇಡ್ಕರ್ ಹೇಳಿದರು

"ನಾನೊಬ್ಬ ಸಂಪ್ರದಾಯವಾದಿ. ಆದರೆ ವಿಚ್ಛೇದನದ ಹಕ್ಕನ್ನು ಮಹಿಳೆಯರಿಗೆ ನೀಡಬೇಕು. ಆದರೆ ಈ ಹಕ್ಕನ್ನು ದುರುಪಯೋಗಪಡಿಸಿಕೊಳ್ಳಬಾರದು. ಹಾಗಾಗಿ ಈ ಹಕ್ಕಿನೊಡನೆ ಕೆಲವು ನಿರ್ಬಂಧನೆಗಳನ್ನೂ ಹಾಕಲಾಗಿದೆ."

ಇದನ್ನು ಇವರು ವಿವರಿಸಿದ್ದಲ್ಲದೇ ಈ ಹಕ್ಕಿನ ದುರಪಯೋಗವಾಗದಿರುವಂತೆ ಅರ್ಜಿಯನ್ನು ಜಿಲ್ಲಾ ನ್ಯಾಯಾಧೀಶರ ಮುಂದೆ ಸಲ್ಲಿಸಬೇಕೆಂದು ಹೇಳಿದರು. ಜೊತೆಗೆ ಹಿಂದೂ ಗಣ್ಯ ಮಹಿಳೆಯರಿಗೆ ಮಹಿಳಾ ಅಭಿವೃದ್ಧಿಯ ಬಗ್ಗೆ ಕಾಳಜಿ ಇಲ್ಲ ಎಂದು ಇವರು ಟೀಕಿಸಿದ್ದರು. ಮಸೂದೆಯಲ್ಲಿ ಮಹಿಳಾ ಪ್ರಗತಿಗೆ ಅಡ್ಡಿಯಾಗಿರುವ ವಿಚಾರಗಳನ್ನು ತೆಗೆಯಲಾಗಿದೆ ಎಂದೂ ಕೂಡಾ ಇವರು ಹೇಳಿದ್ದರು.

ಹಿಂದೂ ಕೋಡ್ ಬಿಲ್‌ನ್ನು ಸಂಪ್ರದಾಯವಾದಿಗಳೆಲ್ಲರೂ ವಿರೋಧಿಸಿದರು. ಆಳುವ ಪಕ್ಷದಲ್ಲಿ ಈ ವಿಚಾರದಲ್ಲಿ ಒಡಕುಂಟಾಯಿತು. ಹಾಗಾಗಿ ಈ ಮಸೂದೆ ಹಾಗೇ ಉಳಿಯಿತು. ಕಾಂಗ್ರೆಸ್ ಪಕ್ಷವು ಹಿಂದೂ ಕೋಡ್ ಮಸೂದೆಯನ್ನು ಬೆಂಬಲಿಸಲಿಲ್ಲ. ಹಿಂದೂ ಕೋಡ್ ಮಸೂದೆಯನ್ನು ಕೈ ಬಿಡಲಾಯಿತು. ಇದಕ್ಕಾಗಿಯೇ ಅಂಬೇಡ್ಕರ್‌ರವರು ಕ್ಯಾಬಿನೆಟ್‌ಗೆ ರಾಜೀನಾಮೆ ನೀಡಿದರು.

---

# ದಲಿತ ಸ್ತ್ರೀ ಲೋಕ

*ಸರಸ್ವತಿ ದು.*

ಮೀಸಲಾತಿ ಎಂದಕೂಡಲೆ ಎಲ್ಲರಿಗೂ ತಟಕ್ಕನೆ ನೆನಪಾಗುವುದು S.C., S.T.ಗಳು. ,ಬಹಳಷ್ಟು ಜನ, ತಮಗೆ ದಕ್ಕದ ಸೌಲಭ್ಯ ಇನ್ಯಾರಿಗೋ ದಕ್ಕುತ್ತಿರುವುದು ಉಂಟುಮಾಡುವ ಹೊಟ್ಟೆಯುರಿಯಿಂದಲೇ ಪ್ರತಿಕ್ರಿಯಿಸುತ್ತಾರೆಯೇ ಹೊರತು ಉರಿಯನ್ನ ಮೀರಿ ಪ್ರತಿಕ್ರಿಯಿಸುವುದಿಲ್ಲ.

35% ತಗೊಂಡ್‌ಬಿಟ್ಟು ಇಂಜಿನಿಯರಿಂಗ್, ಮೆಡಿಕಲ್ ಸೀಟ್ ಗಿಟ್ಟಿಸಿಕೊಂಡುಬಿಡ್ತಾರೆ, ನಾಳೆ ಡಾಕ್ಟರೋ, ಇಂಜಿನಿಯರೋ ಆದ್ರೆ ಜನರ ಪ್ರಾಣ ಗೋವಿಂದ, ಕಟ್ಟಿದ ಮನೆ ಗೋವಿಂದ.

35% ತಗೊಂಡೋನ್ನಾ Pilot ಮಾಡಿಬಿಟ್ರೆ ದೇವ್ರೇ ಗತಿ, ವಿಮಾನ ಓಡಿಸ್ಲೋಕೆ ತಲೆ ಬೇಕು, Reservation ಅಲ್ಲ.

ಕಾಲೇಜ್‌ನಲ್ಲಿ 18% ಮೇಷ್ಟ್ರು ಪಾಠ ಮಾಡೋದು ನೋಡ್ಬೇಕು. 'ಅ'ಕಾರ 'ಹ'ಕಾರಕ್ಕೆ ವ್ಯತ್ಯಾಸವೇ ಇಲ್ಲ. ಸರಿಯಾಗಿ ಉಚ್ಚರಿಸೋದೇ ಬರಲ್ಲ. ಅವನನ್ನ ಮೇಷ್ಟ್ರು ಮಾಡಿದಾರೆ. ವಿದ್ಯಾರ್ಥಿಗಳು ಉದ್ಧಾರವಾದ ಹಾಗೆ. ಇವು ಮಾಮೂಲಿ ಪ್ರತಿಕ್ರಿಯೆಗಳು. ಸ್ವಲ್ಪ Soft Corner ಇರೋರು.

"ಯಾವ ಜಾತಿಯವನೇ ಆಗ್ಲಿ, ಬುದ್ಧಿವಂತ ಆದ್ರೆ, Capable ಅಂದ್ರೆ ಗೌರವಿಸಬೇಕು."

"ಸಂಸ್ಕೃತ ಶ್ಲೋಕ ಎಷ್ಟು ಚೆನ್ನಾಗಿ ಹೇಳ್ತಾರೆ, ಅಂದ್ರೆ ಯಾವ ಬ್ರಾಹ್ಮಣರಿಗೂ ಕಡಿಮೆ ಇಲ್ಲ."

"S.C.ಗಳಂದ್ರೂ ಎಷ್ಟ್ ನೀಟಾಗಿದ್ದಾರೆ, ಹೊಲಸೆಲ್ಲ ತಿನ್ನೋದಿಲ್ಲ, ಮನೆ ಅಂತೂ ಎಷ್ಟು ನೀಟಾಗಿ ಇಟ್ಕೊಂಡಿದಾರೆ ಅಂತ."

"ನೋಡೋಕೆ ಬೆಳ್ಳಗೆ ಎಷ್ಟು ಚೆನ್ನಾಗಿದ್ದಾಳೆ ಅಂತಾ, SC ಅಂತ ಪ್ರಮಾಣ ಮಾಡುದ್ರು ನಂಬೋಕಾಗಲ್ಲ."

Clean ಆಗಿ ಇದಾರೆ ಅಂದ್ರೆ,. ನಾವು ಜಾತಿ ಗೀತಿ ನೋಡೊಲ್ಲ, ಅವರ ಮನೆಗೆ ಹೋಗ್ತೀವಿ, ಅವರನ್ನು ನಾವು ಕರೀತೀವಿ.

'S.C. ಆದ್ರೂನೂ ತುಂಬಾ brilliant, ಪ್ರತಿ ವರ್ಷ Distinctionನಲ್ಲೆ ಪಾಸಾಗೋದು.'

ಈ ಮಾತುಗಳನ್ನ ಬುದ್ಧಿ ಬಂದಾಗಿನಿಂದ ಇಲ್ಲಿಯವರೆಗೂ ಕೇಳುತ್ತಲೇ ಬಂದಿದ್ದೇನೆ. ಕೇಳಿದಾಗಲೆಲ್ಲ ಮೌನವಾಗಿ ಸಂಕಟ ಅನುಭವಿಸಿದ್ದೇನೆ. ಎಲ್ಲರೂ ಯಾವುದನ್ನು ಅರ್ಹತೆ ಎನ್ನುತ್ತಾರೋ ಅಂತಹ ಅರ್ಹತೆ ಇದೆ ಎಂಬುದು ತಿಳಿದಾಗ ಸಿಟ್ಟಿನಿಂದ, ಉದ್ಧಟತನದಿಂದ ಸವಾಲು ಹಾಕಿ ಚೀರಾಡಿದ್ದೇನೆ. 'ಮನುಷ್ಯ'ರ ಒಡನಾಟದಲ್ಲಿ ಉದ್ಧಟತನದ ಬಗ್ಗೆ ನಾಚಿಕೆ ಪಟ್ಟುಕೊಂಡಿದ್ದೇನೆ.

ಮೀಸಲಾತಿಯಲ್ಲಿ ಓದಿ, ಮೀಸಲಾತಿಯಲ್ಲೇ ಕೆಲಸಗಿಟ್ಟಿಸಿಕೊಂಡಿರುವ ನಾನು ಮೀಸಲಾತಿಯನ್ನು ಸಮರ್ಥಿಸಿಕೊಳ್ಳುತ್ತೇನೆ. ಹೋರಾಟ ನಡೆಸಿ ದಲಿತರಿಗೆ ಅವಕಾಶ ಕಲ್ಪಿಸಿಕೊಟ್ಟವರಿಗೆಲ್ಲ ನಾನು ಋಣಿ. ಮೀಸಲಾತಿ ಇಲ್ಲದೆ ಹೋಗಿದ್ದರೆ ಇನ್ನೊಂದು ಸಾವಿರ ವರ್ಷವಾದರೂ ದಲಿತರಿಗೆ ವಿದ್ಯೆ ಸಿಗುತ್ತಿರಲಿಲ್ಲ. ಹೊಸ ಅರಿವು, ಜಾಗೃತಿ ಮೂಡಲು ಸಾಧ್ಯವಾಗುತ್ತಲೆ ಇರಲಿಲ್ಲ. ಮೀಸಲಾತಿ ಕುರಿತು S.C., S.T.ಗಳ ಮೇಲೆ ಕೆಂಡ ಕಾರುವವರು (ಇವರಿಗೆ ಮಿಲಿಟರಿ Quota, Sports Quota ಇತ್ಯಾದಿ ನೆನಪೇ ಆಗುವುದಿಲ್ಲ) ಮೀಸಲು ಜಾತಿಯವರು ಅನುಭವಿಸುವ ನೋವು, ಅವಮಾನ, ಕೀಳರಿಮೆ ಪಾಲನ್ನು ಹಂಚಿಕೊಳ್ಳಲು ಸಿದ್ಧರಿದ್ದಾರೆಯೇ? ಅರ್ಹತೆ ಕೇವಲ ಉಚ್ಚ ಜಾತಿಯವರ ಸ್ವತ್ತೆಂದು ತಿಳಿದಿದ್ದಾರೆಯೇ? ಅರ್ಹತೆ ಕೇವಲ ಉಚ್ಚ ಜಾತಿಯವರ ಸ್ವತ್ತೆಂದು ಹಾರಾಡುವವರು 90%, 95% ತೆಗೆದುಕೊಳ್ಳುವ ದಲಿತ ವಿದ್ಯಾರ್ಥಿಗಳ ಬಗ್ಗೆ ಯಾಕೆ ಕುರುಡಾಗಿರುತ್ತಾರೆ? ಬುದ್ಧಿವಂತ ವಿದ್ಯಾರ್ಥಿಗೆ ಇವರು ತೊಡಿಸುವ ಕಿರೀಟವೆಂದರೆ S.C. ಆದ್ರೂ ಬುದ್ಧಿವಂತ! ಇವರ ಔದಾರ್ಯ, ಉದಾರತೆಯೆಂದರೆ - "ನಮ್ಮ ಮನೆಯಲ್ಲಿ ಜಾತೀಯತೆ follow ಮಾಡಲ್ಲ, ನಮ್ಮೊಂದಿಗೆ ಕೂರಿಸಿಕೊಂಡು ನಾವು ಊಟ ಮಾಡುವ ತಟ್ಟೆಯಲ್ಲೆ ಊಟ ಹಾಕುತ್ತೇವೆ". ಇವರ ಮನೆಯೊಳಗೆ ಹೋಗಿ ಇವರೊಂದಿಗೆ ಕೂತು ಊಟ ಮಾಡಿ ಧನ್ಯರಾಗಬೇಕು ನಾವು. ಇವರುಗಳ ದೇವಸ್ಥಾನಗಳಿಗೆ ಉದಾರ ಹೃದಯಿಗಳಾಗಿ ಒಳಹೋಗಲು ಬಿಟ್ಟಾಗ ಸಾರ್ಥಕರಾಗಬೇಕು ನಾವು. ಹೇಗಿದ್ದಾರೆ ಅಂದ್ರೆ S.C.

ಅಂತ ಅನ್ನಿಸೋದೇ ಇಲ್ಲ ಗೊತ್ತಾ ಎನ್ನುವುದು ಸಮಗೊಂದು ದೊಡ್ಡ ಬಿರುದು.

ಜಾತಿಯ ಹೆಸರಿನಲ್ಲಿ ಅನುಭವಿಸುವ ಅವಮಾನ, ಕೀಳರಿಮೆ ಅನುಭವಿಸಿದವರಿಗಷ್ಟೇ ತಿಳಿಯುವುದು. ಯಾವುದೊ ಅಧ್ಯಯನಕ್ಕೆಂದು ಸಂದರ್ಶನಗಳನ್ನು ಮಾಡಲು ಧಾರವಾಡಕ್ಕೆ ಹೋದೆ. ಅಣ್ಣ ಹುಬ್ಬಳ್ಳಿಯಲ್ಲಿ ವೈದ್ಯನಾಗಿದ್ದ. ಬಹಳಷ್ಟು ಜನರ ಪರಿಚಯವಿತ್ತು ಅವನಿಗೆ, ಅವನಿಗೆ ತುಂಬಾ ಪರಿಚಯವಿದ್ದ, ಮನೆ ಮಗನಂತೆ ವಿಶ್ವಾಸ ತೋರಿಸುತ್ತಿದ್ದವರ ಮನೆಗೆ ನನ್ನನ್ನು ಕರೆದುಕೊಂಡು ಹೋದ. ಅವರನ್ನು ನನಗೆ ಪರಿಚಯಿಸಿ ಪಕ್ಕದ ಹಳ್ಳಿಯಲ್ಲಿದ್ದ ಕ್ಯಾಂಪ್‌ಗೆ ಹೋಗಿ ಬರುತ್ತೇನೆ, ಬರುವ ವೇಳೆಗೆ ಸಂದರ್ಶನ ಮುಗಿದಿದ್ದರೆ ಒಟ್ಟಿಗೆ ಹೋಗೋಣ ಎಂದು ಹೇಳಿ ವ್ಯಾನ್ ಹತ್ತಲು ಹೋದವನು ಏನೋ ನೆನಪಿಸಿಕೊಂಡವನಂತೆ ಹಿಂದೆ ಬಂದು ಬಾ ಎಂದು ನನ್ನನ್ನು ಹತ್ತಿರ ಕರೆದ. ಯಾರಿಗೂ ಕೇಳದಂತೆ ಮೆಲ್ಲಗೆ ಹಲ್ಲುಕಚ್ಚಿ ಗೊಣಗಿದ. "ಜಾತಿ ಕೇಳಿದ್ರೆ ನಿಜ ಹೇಳಬೇಡ, ಗೌಡ್ರು ಅನ್ನು" ಮತ್ತೆ ಮತ್ತೆ ಅದನ್ನೆ ಗೊಣಗಿ ವ್ಯಾನ್ ಹತ್ತಿ ಹೋದ. ಜಾತಿ ಕೇಳಿದರೆ ಯಾವುದೇ ಮುಜುಗರವಿಲ್ಲದೆ, ಮಾಮೂಲಾಗಿ ಮಾದಿಗ್ರು ಎಂದು ಹೇಳುವುದನ್ನು ರೂಢಿ ಮಾಡಿಕೊಂಡಿದ್ದ ನನಗೆ ಕೊಂಚ ಗಲಿಬಿಲಿಯಾಯ್ತು. ಕೇಳಿದಾಗ ನೋಡಿಕೊಂಡರಾಯ್ತು ಎಂದು ಸುಮ್ಮನಾದೆ. ಆ ಮನೆಯವರು ಚೆನ್ನಾಗಿ ಮಾತನಾಡಿದರು. ಅನೇಕ ಉಪಯುಕ್ತ ಮಾಹಿತಿ ನೀಡಿದರು. ಮಧ್ಯಾಹ್ನವಾಯಿತು, ಊಟ ಮಾಡಿ ಬನ್ನಿ ಎಂದರು. ತುಂಬಾ ಒತ್ತಾಯ ಮಾಡಿದ್ದಕ್ಕೆ ಒಪ್ಪಿಕೊಳ್ಳಲೇಬೇಕಾಯ್ತು. ಮಣೆ ಹಾಕಿ, ದೊಡ್ಡ ಗಂಗಾಳದಲ್ಲಿ ರುಚಿ ರುಚಿಯಾದ ವಿವಿಧ ಅಡುಗೆಗಳನ್ನು ಬಡಿಸಿ ಊಟ ಮಾಡೆಂದರು. ತಟ್ಟೆ ಕೈಲಿ ಹಿಡಿದು ತುತ್ತು ಬಾಯಿಗಿಡುವಾಗ ಕೇಳಿದರು ನಿಮ್ಮದು ಯಾವ ಮತ? ಉಸಿರು ಸಿಕ್ಕಿಕೊಳ್ತು, ಸುಳ್ಳು ಹೇಳಲು ಮನಸ್ಸಾಗದೆ ಜಾಣತನದಿಂದ ನೋಡಿದ್ರೆ, ಗೊತ್ತಾಗಲ್ಲ, ನಾನು ಹೆಚ್ ಜಾತಿ ಅಂದೆ. 'ಡಾಕ್ಟ್ರು ಅಂದ್ರೆ ನಮ್ಗೆ ಭಾಳ ವಿಶ್ವಾಸ ಅದ್ಕೆ ಕೇಳಿದ್ವಿ, ಇನ್ನೆದುಕ್ಕು ಅಲ್ಲ' ಅಂದ್ರು, ಉತ್ತರ ಹೇಳಲೇಬೇಕಾದ ಸಂದರ್ಭ ಸುಳ್ಳು ಹೇಳೋಕೆ ಇಷ್ಟ ಆಗ್ತಿಲ್ಲ. ನಿಜ ಹೇಳೋಣ ಅಂದ್ರೆ ನಾನೇನೂ ಒಂದು ದಿನಕ್ಕೆ ಬಂದು ಹೋಗೋಳು, ಆದ್ರೆ ಅಣ್ಣ ಇಲ್ಲೆ ಇರ್ಬೇಕಾದೋನು, ಅವನಿಗೇನು ತೊಂದ್ರೆ ಆಗುತ್ತೊ ಏನೊ? ಹೀಗೆ ತೊಳಲಾಡಿ ಕೊನೆಗೆ ಅಣ್ಣ ಹೇಳಿಕೊಟ್ಟ ಸುಳ್ಳನ್ನೆ ಇಷ್ಟವಿಲ್ಲದಿದ್ದರೂ ಹೇಳಿದೆ. ತರಾವರಿ ಅಡುಗೆ ನೋಡಿ ಊಟ ಮಾಡಬೇಕೆಂದುಕೊಂಡವಳಿಗೆ ಊಟ ಗಂಟಲಲ್ಲಿ ಸಿಕ್ಕಿಕೊಂಡು ಮಾಮೂಲಿಯಾಗಿ ತಿನ್ನುವುದರಲ್ಲಿ ಕಾಲುಭಾಗ ತಿಂದು ಕೈ ತೊಳೆದುಕೊಂಡುಬಿಟ್ಟೆ. ಎಷ್ಟು ಬಲವಂತ ಮಾಡಿದರೂ ಉಣ್ಣಲಿಲ್ಲ. ಅವರೂ ಸಹ 'ಪಾಪ, ನೀವು ಸಿಟಿಯವರು ನಮ್ಮ ಅಡುಗೆ ಹಿಡಿಸ್ಲಿಲ್ಲ ಅನ್‌ಸ್ತದೆ' ಎಂದು ಸುಮ್ಮನಾದರು.

ವಾಪಸ್ಸು ಬಂದು ಅಣ್ಣನೊಡನೆ ಕೂಗಾಡಿದೆ. ಮನೆ ಮಗನ ಹಾಗೆ ನೋಡ್ಕೋತಾರೆ ಅಂತಿಯಾ, ಅವರ ಹತ್ರ ಯಾಕೆ ನೀನು ಜಾತಿ ವಿಷಯ ಹೇಳಲಿಲ್ಲ. ಅವರಿಗೆ ನಿನ್ನ ಮೇಲೆ ನಿಜವಾಗ್ಲೂ ವಿಶ್ವಾಸ ಇದ್ರೆ ನಿನ್ನ ಜಾತಿ ಅವರನ್ನ Bother ಮಾಡಲ್ಲ ಅಂದೆ. ಅದಕ್ಕೆ ಅವನೆಂದ "ಅವರಿಂದ ಪಡ್ಕೊಂಡಿರೊ, ಪ್ರೀತಿ ವಿಶ್ವಾಸಾನ, ಜಾತಿ ಹೆಸ್ರೇಳಿ ಯಾಕೆ ಕಳ್ಕೊಳ್ಳಿ".

ಹೀಗೆ ಸುಳ್ಳು ಹೇಳಿ ಬಾಡಿಗೆ ಮನೆ ಪಡೆದುಕೊಂಡು ಮಾಂಸ ತಿನ್ನುವುದನ್ನ ಬಿಟ್ಟಿರುವುದು, ತಮ್ಮ ಮನೆಯೊಳಗೆ ಮೊಟ್ಟೆಯನ್ನು ಹುರಿದರೆ ವಾಸನೆ ಬರಬಹುದೆಂದು ಕದ್ದು ಮುಚ್ಚಿ ಮೊಟ್ಟೆ ಬೇಯಿಸಿಕೊಂಡು ತಿನ್ನುವುದು, ಸತ್ಯನಾರಾಯಣ ಪೂಜೆ ಮಾಡಿಸುವುದು, ಪುರೋಹಿತರನ್ನು ಕರೆಸಿ ಮದುವೆ, ಗೃಹ ಪ್ರವೇಶ ಮಾಡಿಸುವುದು, ಭಾಷೆಯನ್ನು - ಬಾ, ಕುಂತ್ಕ, ಉಣ್ಣು, ಮಲಿಕ್ಕ, ಎನ್ನುವುದರಿಂದ ಬನ್ನಿ, ಊಟ ಮಾಡಿ, ಮಲಗು ಎಂದು ಬದಲಾಯಿಸಿಕೊಂಡಿರುವುದು - ಇಂತಹ ಸಾವಿರಾರು ವಿಷಯಗಳು ನಗರದ ದಲಿತರೊಳಗೆ ಅಡಗಿ ಕುಳಿತಿವೆ. ಮೀಸಲಾತಿ ಎಂದರೆ ಕೆಂಡ ಕಾರುವವರು ತಮ್ಮ ಮನದ ಕದಗಳನ್ನು ತೆರೆದು ಇಂತಹವನ್ನು ಗಮನಿಸಬೇಕು. ಸಭೆಯೊಂದರಲ್ಲಿ ಮಿತ್ರರೊಬ್ಬರು ಹೇಳಿದ್ದರು, ನಮ್ಮ ಬಟ್ಟೆಯನ್ನು ನೀವು ಒಗೆಯುವುದಾದರೆ ನಮ್ಮ ಮಲವನ್ನು ನೀವು ಹೊರುವುದಾದರೆ, ನಮ್ಮ ಚಪ್ಪಲಿಗಳನ್ನು ನೀವು ಹೊಲೆಯುವುದಾದರೆ, ನಮ್ಮ ಕಕ್ಕಸ್ಸುಗಳನ್ನು ನೀವು ತೊಳೆಯುವುದಾದರೆ, ನಾವು ಮೀಸಲಾತಿ ಬೇಡ ಅನ್ನುತ್ತೇವೆ. ಈ ಮಾತುಗಳ ಹಿಂದಿನ ಅರ್ಥವನ್ನು ಅರಿತುಕೊಳ್ಳುವ ಸೂಕ್ಷ್ಮತೆಯನ್ನು ಕೆಂಡಕಾರುವವರು ಬೆಳೆಸಿಕೊಳ್ಳಬೇಕು.

ಕೇಸರಿಗಳು ಈಗಾಗಲೆ ಹೊರಡಿಸಿರುವ ಎರಡು ದಲಿತ ವಿರೋಧಿ ಸುಪ್ರೀಂ ಕೋರ್ಟ್ ತೀರ್ಪುಗಳು, ಸಂವಿಧಾನದ ಪರಾಮರ್ಶೆಗೆ ಕೈ ಹಾಕಿರುವುದು ಆತ್ಮಾಭಿಮಾನ ಬೆಳೆಸಿಕೊಳ್ಳಲು ಪ್ರಯತ್ನಿಸುವ ನನ್ನಂತಹವರಲ್ಲಿ ಅಭದ್ರತೆ ಹುಟ್ಟಿಸಿದೆ ಎಂದರೆ ಇನ್ನು ಏನೇನೂ ತಿಳಿಯದ ಅಮಾಯಕ ದಲಿತರ ಸ್ಥಿತಿ ಏನಾಗಬಹುದು?

ಸಭೆಯೊಂದರಲ್ಲಿ ವೇದಿಕೆಯ ಮೇಲಿದ್ದವರೊಬ್ಬರು Movement built by great political leaders have

been weakened by people like Mahadeva. Dalit movement has reached a stage of impotency ಎಂದರು. ಗೆಳೆಯರಿಬ್ಬರು ಎದ್ದು ನಿಂತು ಪಟ್ಟು ಹಿಡಿದು ಭಾಷಣಕಾರರು ಕ್ಷಮೆ ಯಾಚಿಸಬೇಕೆಂದು ಕೇಳಿದರು. Impotency ಎಂಬ ಪದ ಅಮಾನವೀಯವಾದುದು, ಅದನ್ನು ಉಪಯೋಗಿಸಿದ್ದಕ್ಕಾಗಿ ಕ್ಷಮೆಯಾಚಿಸಬೇಕು ಮತ್ತು ತುಳಿಸಿಕೊಂಡ ಜನ ತಮ್ಮ ನೋವು, ಅವಮಾನಗಳನ್ನು ಹೋರಾಟದ ಚೈತನ್ಯವಾಗಿಸಿಕೊಂಡು ಕಟ್ಟಿದ ಚಳುವಳಿಯನ್ನು ಕುರಿತು ಮಾತನಾಡುವಾಗ ಎಚ್ಚರದಿಂದ ಮಾತನಾಡಬೇಕು. ಅದರರ್ಥ ಚಳುವಳಿಯ ಮಿತಿಗಳನ್ನು ಕುರಿತು ಮಾತನಾಡಲೇಬಾರದೆಂದು ಅಲ್ಲ. ದಲಿತರು ಬೇರೆಯವರನ್ನು ಬನ್ನಿ ಎಂದು ಕರೆಯಲಿಲ್ಲ, ಬೇರೆಯವರು ಇವರೂ ನಮ್ಮವರೆಂದು ಬರಲಿಲ್ಲ, ಇಬ್ಬರ ನಡುವಿನ ಗೋಡೆ ಬೀಳಬೇಕು. ವಿಶ್ವಾಸ, ಸಮಾನತೆಯ ಮೇಲಿನ ನಂಬಿಕೆಯಷ್ಟೇ ದಾರಿ ತೋರಿಸಬಲ್ಲದೆಂದು ಇಬ್ಬರು ಗೆಳೆಯರು ನೋವಿನಲ್ಲಿ ಒಡಲಾಳದಿಂದ ಆಡಿದ ಮಾತು ಸಾವಿರ, ಕೋಟಿ ಭರವಸೆಯ ಮಿಂಚುಗಳನ್ನು ಮನದೊಳಗೆ ಮೂಡಿಸಿತು. ವೇದಿಕೆಯ ಮೇಲಿನಿಂದ ಮಾತನಾಡಿದ ವ್ಯಕ್ತಿ activist ಎಂದುಕೊಂಡಿರುವ ದಲಿತ. ಪ್ರತಿಕ್ರಿಯಿಸಿದ ಗೆಳೆಯರು ದಲಿತರಲ್ಲದಿದ್ದರು ದಲಿತ ಚಳುವಳಿಯಲ್ಲಿ ಹುಟ್ಟಿನಿಂದಲೂ ಸಕ್ರಿಯವಾಗಿ ದುಡಿಯುತ್ತಿರುವವರು. ದಲಿತರ ನೋವಿನೊಂದಿಗೆ Identify ಮಾಡಿಕೊಳ್ಳುವ ಸಮಾನತೆಯನ್ನು ನಂಬುವ ಹೃದಯವಂತರು ಮಾತ್ರ ನನ್ನಂತಹವರ Insecurity ಕತ್ತಲಿಗೆ ಬೆಳಕಾಗಬಲ್ಲರು.

## ವಿಚ್ಛೇದನೆ ಮಕ್ಕಳಾಟಿಕೆಯಲ್ಲ

ಎಷ್ಟೋ ಸಾರಿ ಕೆಳಜಾತಿಯ ಅಧಿಕಾರಿ ಇದ್ದ ಹುದ್ದೆಗೆ ಮೇಲ್ಜಾತಿಯ ಜಾತಿವಾದಿಯೊಬ್ಬರು ಹೋದಾಗ ಆಸನವನ್ನು ಶುದ್ಧೀಕರಿಸಿದ ಸುದ್ದಿ ಕೇಳಿದ್ದೇವೆ. ಈ ರೋಗ ಸಾಮಾನ್ಯ ಸ್ಥಾನದಿಂದ ಹಿಡಿದು ನ್ಯಾಯವನ್ನು ಕೊಡುವ ನ್ಯಾಯಾಲಯಗಳಲ್ಲೂ/ನ್ಯಾಯಾಧೀಶರಿಗೂ ಹಬ್ಬಿದ್ದು ಸುದ್ದಿಗಳಾಗಿವೆ, ದಾಖಲೆಗಳಾಗಿಲ್ಲ. ವೈಜ್ಞಾನಿಕ ವಿಚಾರ ಹೇಳುವ ವಿಜ್ಞಾನಿಗಳೂ ಜಾತಿಯ ಆಷಾಢಭೂತಿಗಳಾಗಿದ್ದಾರೆ. ತಮ್ಮ ಮನೆ-ಮನಗಳಲ್ಲಿ ಈ ಎಲ್ಲಾ ಕಂದಾಚಾರ ಆಚರಿಸುವ ಜನ ಸಾರ್ವಜನಿಕ ಸ್ಥಳಗಳಲ್ಲಾದರೂ ಕಾನೂನಿನ ಭಯದಿಂದ ಯಾವ ದಾಖಲಾತಿಗೂ ಸಿಗಲಾರದಷ್ಟು ಜಾಣ್ಮೆಯಿಂದ ತಮ್ಮ ಜಾತಿ ಬುದ್ಧಿ ತೋರಿಸಿದ್ದರಿಂದ ಅವು ಸುದ್ದಿಗಳಾಗಷ್ಟೆ ಉಳಿದಿವೆ. ಸುದ್ದಿ ಕೇಳಿ, ಏನೂ ಮಾಡಲಾಗದೆ ಗೊಣಗುಟ್ಟುವಿಕೆಯಲ್ಲಿ ಬಗೆ ಹರಿದಿದ್ದ ಮೇಲಿನ ಪ್ರಕರಣಗಳಿಗಿಂತ ಜಾತಿ ಜಾಡ್ಯದಲ್ಲಿ ಆಧಾರ ಸಹಿತ ವಿಜ್ಞಾನಿಯ ಬಣ್ಣ ಬಯಲಾಗಿ, ಕೋರ್ಟಿನ ಛೀಮಾರಿಗೆ ಪಾತ್ರವಾದ ಆಂಧ್ರದ ಘಟನೆ ಹೀಗಿದೆ.

ಆತ ವಿಜ್ಞಾನಿ, ಹಿರಿಯರು ಒಪ್ಪಿ, ಹೇಳಿ, ಕೇಳಿ ಮದುವೆಯಾದ. ಮಕ್ಕಳೂ ಆದರು. ಇದ್ದಕ್ಕಿದ್ದಂತೆ ಒಂದು ದಿನ ಆತನ ಅರಿವಿಗೆ, ತನ್ನ ಪತ್ನಿ ಹಾಗೂ ಅವಳ ಕುಟುಂಬ ವರ್ಗದವರು ತನ್ನನ್ನು ವಂಚಿಸಿ ಪರಿಶಿಷ್ಟ ಜಾತಿಗೆ ಸೇರಿದ ಹುಡುಗಿಯೊಂದಿಗೆ ಮದುವೆ ಮಾಡಿದ್ದಾರೆ ಎಂದು ಬಂತಂತೆ. ಆಗ ತನಗೆ ಅನ್ಯಾಯ ಹಾಗೂ ಮೋಸವಾಗಿದೆ. ಮೇಲ್ವರ್ಗಕ್ಕೆ ಸೇರಿದ ತಾನು ಇದನ್ನು ಸಹಿಸಲು ಸಾಧ್ಯವಿಲ್ಲವೆಂದು ಆತ ಹೈಕೋರ್ಟಿನ ಕಟ್ಟೆ ಹತ್ತಿದ. ಉಚ್ಚನ್ಯಾಯಾಲಯ ಇದನ್ನು ತಳ್ಳಿಹಾಕಿತು. ಆದರೆ ಹಠಬಿಡದ ವಿಜ್ಞಾನಿ ಸರ್ವೋಚ್ಚ ನ್ಯಾಯಾಲಯದ ಮೊರೆ ಹೋದ. ಇದನ್ನೆಲ್ಲ ಕೂಲಂಕುಷವಾಗಿ ನೋಡಿದ ಕೋರ್ಟ್, ಉಚ್ಚನ್ಯಾಯಾಲದ ತೀರ್ಪನ್ನು ಎತ್ತಿಹಿಡಿದು. "ದಂಪತಿಗಳ ಮಧ್ಯೆ ಕ್ಷುಲ್ಲಕ ಕಾರಣಗಳಿಂದಾಗಿ ಉಂಟಾಗುವ ಭಿನ್ನಾಭಿಪ್ರಾಯಗಳು ಗಂಭೀರ ಸ್ವರೂಪ ತಳೆದುಬಿಡಲು ಇತರರು ಪೂರಕವಾಗಬಾರದೆಂದು; ವಿಚ್ಛೇದನಕ್ಕೆ ಅರ್ಜಿ ಬಂದಾಗ ಏಕಾಏಕಿ ಮಂಜೂರು ಮಾಡದೆ ಉಭಯ ವ್ಯಕ್ತಿಗಳ ಮಧ್ಯೆ ಸಮಸ್ಯೆ ಬಗೆ ಹರಿಸಿಕೊಳ್ಳಲು ಅವಕಾಶ ಮಾಡಿಕೊಡಬೇಕೆಂದು, ಅಲ್ಲದೆ ತೀರ್ಪು ಹೊರಬೀಳುವುದನ್ನೇ ಕಾಯುತ್ತ ಜೀವನದ ಅತ್ಯಮೂಲ್ಯ ವರ್ಷಗಳನ್ನು ವ್ಯರ್ಥಮಾಡಿಕೊಳ್ಳಬಾರದೆಂದು" ಸಲಹೆ ನೀಡಿದೆ.

ಮೇಲಿನ ಪ್ರಕರಣದಲ್ಲಿ ವಿಚ್ಛೇದನ ಬಯಸಿದ್ದ ವ್ಯಕ್ತಿಗೆ ಬುದ್ಧಿ ಹೇಳಿ, ತಪ್ಪಿಲ್ಲದ ಆಕೆಯೊಂದಿಗೆ ಸಂಸಾರ ಮಾಡುವಂತೆ ಆದೇಶಿಸಿದೆ. ವಿಜ್ಞಾನ ಬಲ್ಲ ಅಜ್ಞಾನಿಗೆ ಹಾಗೂ ಇತರರಿಗೆ ಇದು ಪಾಠವಾಗಲಿ!

# ಶ್ರೀಮತಿ ಸಿದ್ಧಾರ್ಥಳ ಪ್ರಶ್ನೆಗಳು

- *ರೂಪ, ಹಾಸನ*

ಅದೆಂತದೋ ಜ್ಞಾನೋದಯವಾಯಿತೆಂದು
ಇದ್ದಕ್ಕಿದ್ದಂತೆ ಉಟ್ಟಬಟ್ಟೆಯಲ್ಲೇ ನೀ ಮನೆಬಿಟ್ಟೆಂದು
ನನ್ನೆದೆಯ ಪ್ರೀತಿ, ಶುದ್ಧೋಧನನ ಮಮತೆ
ನಮ್ಮ ಒಲವಿನ ಸಂಕೋಲೆ ಎಲ್ಲಾ ಒದ್ದು
ಬುಡಸಹಿತ ಕಿತ್ತೆ.
ರಾತ್ರಿ ಕಳೆದು ಬೆಳಗಾಗುವುದರೊಳಗೆ ನೀ ಬುದ್ಧನಾದೆ
ಒಮ್ಮೆಯಾದರೂ ಯೋಚಿಸಿದೆಯಾ ನಾನೇನಾದೆ?
ನೀ ಆ ರಾತ್ರಿ ಕದ್ದೋಡಿದಾಗ ನಿನ್ನ ಹಿಂದೆಯೇ ಬರಲು
ನಾ ಸೀತೆಯೂ ಆಗಿರಲಿಲ್ಲ, ಎಚ್ಚರವೂ ಇರಲಿಲ್ಲ!
ಅರಮನೆಯಲ್ಲೇ ಉಳಿದ ಊರ್ಮಿಳೆಯ
ಅಚಲ ನಿರ್ಧಾರವೂ ನನ್ನದಾಗಲಿಲ್ಲ.
ಏಕೆಂದರೆ ನನ್ನ ನಿರ್ಧಾರ ಕೇಳಲು ನೀನೆಲ್ಲಿದ್ದೆ?
ನೀನಾಗಲೇ ಎಲ್ಲಾ ಆಸೆ ತೊರೆದ ಬುದ್ಧನಾಗಿದ್ದೆ!
ನಾನು, ನೀನೆಂಬ ಅಂಕಿಯ ಮುಂದೆ ನಿಂತ ಸೊನ್ನೆಯಾಗಿದ್ದೆ
ನೀ ಹೊರಟು ಹೋದೊಡನೆ ನಾ ಅಕ್ಷರಶಃ ಶೂನ್ಯವಾಗಿದ್ದೆ!

*

ನಿನಗೆ ತಾನೇ ಅಂದೇ ಜ್ಞಾನೋದಯವಾಗಬೇಕಿತ್ತೇ?
ನೀ ಬುದ್ಧನಾಗಲಿಕ್ಕೆ ನಾ ಬಲಿಪಶುವಾಗಬೇಕಿತ್ತೆ?
ನನ್ನೊಂದಿಗೆ ಅಷ್ಟೊಂದು ದಿನಗಳು ಸುಖವುಂಡು
ನನ್ನ ಮಡಿಲು ತುಂಬಿಸಿ
ನನ್ನ ಸುಖ ದುಃಖಗಳ ಸೂತ್ರಧಾರನೇ ನೀನಾಗಿದ್ದೆ.
'ನಾನು' ನೀ ಸೃಷ್ಟಿಸಿದ ಪಾತ್ರವಾಗಿದ್ದೆ
ನನ್ನ ಎಲ್ಲಾ ಸಾರ ಕಿತ್ತುಕೊಂಡ ಮೇಲೆಯೂ
ಇಲ್ಲ. ಏನೂ ಆಗೇ ಇಲ್ಲವೆಂಬಂತೆ
ತಟ್ಟನೆ ಎಲ್ಲಾ ಕೊಡವಿ ಹೊರಟುಬಿಟ್ಟೆಯಲ್ಲಾ?

ಈ ನಿನ್ನ ಜ್ಞಾನೋದಯ
ನನ್ನ ವರಿಸುವ ಮೊದಲಾದರೂ ಆಗಿದ್ದರೆ?
ನಾ ಇನ್ನಾವನೋ ಬುದ್ಧನಾಗಲಾರದವನೊಬ್ಬನೊಡನೆ
ಸುಖವಾಗಿರುತ್ತಿರಲಿಲ್ಲವೇ?

*

ಆಸೆಯೇ ದುಃಖಕ್ಕೆ ಮೂಲ ಎಂದೆಲ್ಲಾ ಏನೋ
ಒಣವೇದಾಂತ ಹೇಳಿದ ಸಿದ್ಧಾರ್ಥನೇ ಕೇಳು
ನನಗೂ ಆಕಸ್ಮಾತ್ ನಿನ್ನಂತೆ ಯಾವುದೋ ಜ್ಞಾನೋದಯವಾಗಿ
ನಿನ್ನಂತೆಯೇ ಎಲ್ಲಾ ಬಂಧನ ಕಿತ್ತೊಗೆದು ಬುದ್ಧಳಾಗ
ಹೊರಟಿದ್ದರೆ!
ನನಗೆ ನೀನೇನೆನ್ನುತ್ತಿದ್ದೆ? ಜನರೇನೆನ್ನುತ್ತಿದ್ದರು?
ಗಂಡನ ಬಿಟ್ಟವಳೆಂದೆ? ಓಡಿಹೋದವಳೆಂದೇ?

*

ನನ್ನ ಬಿಟ್ಟರೂ ನಿನಗೆ ಬದುಕುಳಿಯುತ್ತಿತ್ತು.
ಆದರೆ ನನಗೆ?
ನಾನು ಸಿದ್ಧಾರ್ಥನ ಶ್ರೀಮತಿಯಾಗಿದ್ದೆ!
ನಿನ್ನೊಂದಿಗಿದ್ದೆನೋ ಬಿಟ್ಟಿದ್ದೆನೋ ಅದು ಬೇರೆಯದೇ
ವಿಷಯ. ನಾ ಸಾಯುವವರೆಗೂ ಸಿದ್ಧಾರ್ಥನ ಶ್ರೀಮತಿಯೇ!
ಹೆಚ್ಚೆಂದರೆ ರಾಹುಲನ ಮಾತೆ ಎನಿಸಿಕೊಂಡೇನು?
ನಾನೆಂದೂ ಯಶೋಧರ ಆಗಲೇ ಇಲ್ಲ!

*

ಕೊನೆಯದಾಗಿ ನನ್ನದೊಂದೇ ಪ್ರಶ್ನೆ
ಅಷ್ಟೆಲ್ಲಾ ಜನರಿಗೆ ಮಾರ್ಗದರ್ಶಕನಾಗಿರುವ ಬುದ್ಧನೆ ಕೇಳು
ನಿನ್ನ ಜ್ಞಾನೋದಯದ ಪರಿಧಿಯೊಳಗೆ
ಈ ಸಿದ್ಧಾರ್ಥನ ಶ್ರೀಮತಿಗೇನುಪದೇಶ?

# ಮಾರ್ಚ್‌ನಲ್ಲಿ ಕೊಲೆಯಾದ ಪ್ರಮೀಳ

ಮಾರ್ಚ್ 8ರಂದು ಅಂತರ್ರಾಷ್ಟ್ರೀಯ ಮಹಿಳಾ ದಿನಾಚರಣೆಯನ್ನು ಆಚರಿಸುವ ಸಂಭ್ರಮದಲ್ಲಿರಬೇಕಾದರೆ ಅದರ ಹಿಂದಿನ ದಿನ ಮಾರ್ಚ್ 7ನೇ ತಾರೀಕು ಬೆಳಿಗ್ಗೆ 19 ವರ್ಷದ ಹುಡುಗಿ ಪ್ರಮೀಳಳ ಕೊಲೆ ಅವಳ ಪತಿ, ಮೈದುನ, ಅತ್ತೆ, ಮಾವನಿಂದ ಆಯಿತು. ಮದುವೆಯಾಗಿ ಕೇವಲ ಎರಡೇ ತಿಂಗಳಲ್ಲಿ ಈ ಕೊಲೆ ನಡೆದಿದ್ದು ಕುಶಾಲನಗರದ ನಾಗರೀಕರನ್ನು ಬೆಚ್ಚಿಬೀಳುವಂತೆ ಮಾಡಿತು. ಕೊಲೆ ಆದ ಮೇಲೂ ಅಸಹಾಯಕ ತಾಯಿ ಪೊಲೀಸರಿಗೆ ಕಂಪ್ಲೈಂಟ್ ಕೊಡಲು ಹಿಂಜರಿದಿದ್ದು ನೋಡಿದರೆ ನಮ್ಮ ಕಾನೂನು ವ್ಯವಸ್ಥೆ ಯಾವ ರೀತಿ ಕೆಲಸ ಮಾಡುತ್ತಿದೆ ಎಂಬುದನ್ನು ನಾವು ಗಮನಿಸಬಹುದು. ಪೊಲೀಸರು ಸ್ವಲ್ಪ ಚುರುಕಾಗಿ ಕೆಲಸ ಮಾಡಿದ್ದರೆ ಪ್ರಮೀಳಾ ಇಂದು ಕೂಡಾ ನಮ್ಮ ಜೊತೆಗಿರುತ್ತಿದ್ದಳು.

ತಾನೇ ಪ್ರೇಮಿಸಿ ಮದುವೆಯಾದ ಅವಳ ಗಂಡ ಧರ್ಮ ಇದ್ದಕ್ಕಿದ್ದ ಹಾಗೆ ತನ್ನ ಹೆತ್ತವರೊಂದಿಗೆ ಸೇರಿ ವರದಕ್ಷಿಣೆಯ ಆಸೆಗೆ ಬಲಿಬಿದ್ದು ಆಕೆಯನ್ನು ಹಾಡುಹಗಲೇ ಓಡಾಡಿಸಿ ಹೊಡೆದು ಧಾರುಣವಾಗಿ ಸಾಯಿಸಿ, ಹೆಣವನ್ನು ಅಡಗಿಸುವ ಸಲುವಾಗಿ ಅದನ್ನು ಅಲ್ಲಿ ಇಲ್ಲಿ ಎಳೆದೊಯ್ದು ಪಾಳು ಮನೆಯಲ್ಲಿ ಬಿಟ್ಟು ಪೊಲೀಸರಲ್ಲಿ ಆತ್ಮಹತ್ಯೆ ಎಂದು ಹೇಳಿಕೊಂಡಿದ್ದು; ಪೊಲೀಸರು ಪ್ರಶ್ನಿಸಿದಾಗ "ಇದೆಲ್ಲಾ ಏನು ಮಹಾ; ಇಂತಹದ್ದು ದಿನಾ ನಡೆಯುತ್ತಿರುತ್ತದೆ; ಯಾರಿಗೂ ಏನೂ ಆಗಿಲ್ಲ" ಎಂದು ಸಲೀಸಾಗಿ ಹೇಳಿದ್ದು; ಪೊಲೀಸರು ನಾಲ್ವರು ಅಪರಾಧಿಗಳನ್ನೂ ಜೈಲಿಗೆ ತಳ್ಳಿದಾಗ-ಇಲ್ಲಿ ಎಷ್ಟು ದಿನ ಇರಬೇಕಾಗುತ್ತದೆ? ಒಂದು ವಾರನಾ! 500 ರೂಪಾಯಿ ದಂಡ ಕಟ್ಟಿದರೆ ನಾನು ಮನೆಗೆ ಬಂದು ಬಿಡಬಹುದಲ್ಲಾ" ಎಂದೆಲ್ಲಾ ಹೇಳಿರುವುದನ್ನು ನಾವು ಗಮನಿಸಿದರೆ ನಮ್ಮ ಕಾನೂನು ವ್ಯವಸ್ಥೆ ಎಷ್ಟೊಂದು ಸಡಿಲವಾಗಿ ಇದೆ ಎಂಬುದನ್ನು ಗಮನಿಸಬಹುದು.

ಸಾಯುವ ಹಿಂದಿನ ದಿನ ತಾಯಿ, ಮಗಳು ಪೊಲೀಸ್ ಸ್ಟೇಶನ್‌ಗೆ ಹೋಗಿ "ನಾನು ಗಂಡನ ಮನೆಗೆ ಹೋಗುವುದಿಲ್ಲ, ಅವರೆಲ್ಲಾ ಸೇರಿ ನನ್ನನ್ನು ಕೊಲೆ ಮಾಡುತ್ತಾರೆ" ಎಂದು ಪ್ರಮೀಳಾ ಹೇಳಿಕೊಂಡಾಗ; ಪೊಲೀಸರ ಸಹಾಯಕ್ಕಾಗಿ ಅಂಗಲಾಚಿದರೂ ತಾಯಿ-ಮಗಳಿಗೆ ಕೆಟ್ಟದಾಗಿ ಪೊಲೀಸ್ ಭಾಷೆಯಲ್ಲಿ ಬೈದು ಕಳುಹಿಸಿದ್ದರ ಫಲ ಈ ಕೊಲೆ. ಅಂದು ಅವರು ಗಂಡ ಧರ್ಮನನ್ನು ಸ್ವಲ್ಪವಾದರೂ ಬೆದರಿಸಿದ್ದಿದ್ದರೆ ಈ ಕೊಲೆ ಇಷ್ಟು ಬೇಗ ಆಗುತ್ತಿರಲಿಲ್ಲ.

ಜೀವಂತವಾಗಿರುವ ಒಬ್ಬ ಮಹಿಳೆಗೆ ಆಗುವ ನೋವು, ಹಿಂಸೆಯನ್ನು ಯಾವತ್ತು ಗಂಭೀರವಾಗಿ ಪರಿಗಣಿಸದ ಈ ಪೊಲೀಸ್ ವ್ಯವಸ್ಥೆ ಆಕೆ ಸತ್ತ ಮೇಲೆ ಏನು ತಾನೆ ಮಾಡಲು ಸಾಧ್ಯ? ನಮ್ಮ ದೇಶದ 32 ರಾಜ್ಯಗಳ ಪೈಕಿ 27 ರಾಜ್ಯಗಳಲ್ಲಿ ಹೆಣ್ಣು ಹುಟ್ಟುತ್ತಲೇ ಕೊಲ್ಲುವ ಕ್ರೂರ ಪದ್ಧತಿ ಇದೆ. ಹೆಣ್ಣು ಹುಟ್ಟುವುದನ್ನೇ ನಿರಾಕರಿಸುವಂತಹ ಈ ಪುರುಷ ಪ್ರಧಾನ ಸಮಾಜದಲ್ಲಿ ಸಾವಿನಿಂದ ತಪ್ಪಿಸಿಕೊಂಡು ಬದುಕಿರುವ ಹೆಣ್ಣಿನ ಭವಿಷ್ಯ ಹೇಗೆ ತಾನೆ ಸುಲಲಿತವಾಗಿ ರೂಪಿತವಾಗುವುದು ಸಾಧ್ಯ?

1999ರ ಅಂತ್ಯದಲ್ಲಿ ಸ್ತ್ರೀಯರ ಮೇಲೆ ನಡೆಯುತ್ತಿರುವ ಹಿಂಸೆ, ದೌರ್ಜನ್ಯದ ಪ್ರಮಾಣದಲ್ಲಿ ಹೆಚ್ಚಳ ಕಂಡುಬಂದಿದೆ. ಮಹಿಳೆ ಹಿಂಸೆ ಮುಕ್ತ ವಾತಾವರಣದಲ್ಲಿ ಬದುಕಬೇಕಾದರೆ ಆಕೆ ತನ್ನ ಸುತ್ತ ಭದ್ರವಾಗಿ ನಿಂತಿರುವ ನಾಲ್ಕು ಗೋಡೆಯನ್ನು ಕೆಡವಿ ಹೊರಗೆ ಬರುವ ಅನಿವಾರ್ಯತೆ ಇದ್ದೇ ಇದೆ. ಇಲ್ಲದೇ ಹೋದರೆ ಆಕೆಯು ತನ್ನ ಬಂಧನವನ್ನು ಅನಿವಾರ್ಯವಾಗಿ ಒಪ್ಪಿಕೊಂಡಂತೆ ಕಂಡುಬರುತ್ತದೆ. ಹೆಣ್ಣು ಛಲ ತೊಟ್ಟು ಧೈರ್ಯದಿಂದ ತನ್ನ ವ್ಯಕ್ತಿತ್ವವನ್ನು ಸಂವರ್ಧಿಸಲು ಸಂಘರ್ಷಕ್ಕೆ ಇಳಿಯಲೇಬೇಕು. ಮಹಿಳೆ ಸಂಘರ್ಷಕ್ಕೆ ಇಳಿಯುವುದೇ ಸಂಘಟನೆಗೆ ನಾಂದಿ. ಈ ಸಂಘಟನೆಯ ಮೊದಲ ಹಂತವಾಗಿ ಕುಶಾಲನಗರದ ಪಕ್ಕದ ಹಳ್ಳಿಯಾದ ಮಾದಪಟ್ಟಣದ ಪ್ರಮೀಳಳ ಕೊಲೆಯನ್ನು ಒಂದು ನೆಪವಾಗಿಟ್ಟುಕೊಂಡು ಸುಮಾರು 450ಕ್ಕೂ ಮಿಕ್ಕ ಮಹಿಳೆಯರು ಒಟ್ಟು ಸೇರಿ ಕುಶಾಲನಗರದ ಪ್ರಮುಖ ಬೀದಿಗಳಲ್ಲಿ ಕಳೆದ ಮಂಗಳವಾರ 14ರಂದು ಭಿತ್ತಿಫಲಕ ಮತ್ತು ಬ್ಯಾನರ್ ಹಿಡಿದು ಮೌನ ಮೆರವಣಿಗೆ ನಡೆಸಿ ತಹಶೀಲ್ದಾರರ ಮೂಲಕ ಮಾನ್ಯ ಗೃಹ ಮಂತ್ರಿಯವರಿಗೆ ಮನವಿ ಸಲ್ಲಿಸಿದರು.

ಮಹಿಳೆಯರ ಮೇಲೆ ನಡೆಯುತ್ತಿರುವ ಅಮಾನವೀಯ ದೌರ್ಜನ್ಯ, ಹಿಂಸೆಗಳನ್ನು ಬೆಳಕಿಗೆ ತರುವುದಕ್ಕಾಗಿ, ಶೋಷಿತ ವ್ಯವಸ್ಥೆಯನ್ನು ಮತ್ತು ಅದರ ವಿವಿಧ ರೂಪಗಳನ್ನು

ಗುರುತಿಸುವುದಕ್ಕಾಗಿ, ಮಹಿಳೆಯರೊಂದಿಗೆ ಆತ್ಮೀಯ ಅರ್ಥಪೂರ್ಣ ಸಂವಾದಕ್ಕಾಗಿ, ಮಹಿಳಾ ಆಂದೋಲನದ ಹೊಸ ದಿಕ್ಕುಗಳ ಹುಡುಕಾಟಕ್ಕಾಗಿ "ಜಾಗೃತ ಮಹಿಳಾ ವೇದಿಕೆ" ಕುಶಾಲನಗರದಲ್ಲಿ ಅಸ್ತಿತ್ವಕ್ಕೆ ಬಂದಿದೆ. ಮಹಿಳೆಯರಿಗೆ ತನ್ನ ಹಕ್ಕು, ಕಾನೂನಿನ ಬಗ್ಗೆ ಸಲಹೆ, ಸಂಘಟನೆಯ ಅವಶ್ಯಕತೆಗಳ ಬಗ್ಗೆ ನಿರಂತರವಾಗಿ ಶಿಕ್ಷಣ ನೀಡುವ ಮತ್ತು ಅವರ ಕಷ್ಟಗಳಿಗೆ ಸ್ಪಂದಿಸುವ ಕಾರ್ಯವನ್ನು ಈ ವೇದಿಕೆ ಮಾಡುತ್ತದೆ.

ಶತಮಾನಗಳ ಕಾಲದ ದೀರ್ಘ ನಿದ್ರೆಯಿಂದ ಎಚ್ಚೆತ್ತು ತನ್ನ ಮನದಾಳದ ಶೋಧನೆಯನ್ನು ಮಾಡುವುದು; ಹಣೆಯ ಬರಹ ಅದೃಷ್ಟ ಎಂಬುದನ್ನು ಅಲ್ಲಗಳೆದು; ವೃತ್ತ ವೈಕಲ್ಯಗಳಂತಹ ಅಂಧ ಶ್ರದ್ಧೆಗಳಿಂದ ದೂರ ಸರಿದು; ವಿಶ್ವದತ್ತ ಕಣ್ಣು ತೆರೆದು ನೋಡುವಂತಹವಳು; ಇತಿಹಾಸವನ್ನು ತೆರೆದು ಅದರಲ್ಲಿ ತನ್ನ ಇತಿಹಾಸ ಎಲ್ಲಿದೆ; ಏಕಿಲ್ಲ? ಎಂದು ಪ್ರಶ್ನಿಸುವವಳಾಗಬೇಕಿದೆ ಸ್ತ್ರೀ.

ಹೆಣ್ಣನ್ನು ಶಬ್ದಗಳ ಆಡಂಬರದಲ್ಲಿ ಆರಾಧಿಸಿ ದೈವತ್ವಕ್ಕೆ ಏರಿಸಿ ಸ್ತುತಿಸಿದ ನಮ್ಮ ಸಂಸ್ಕೃತಿ ವಾಸ್ತವದಲ್ಲಿ ಅವಳಿಗೆ ಸಂಪ್ರದಾಯದ ಸಂಕೋಲೆಯನ್ನು ಬಿಗಿದು ದನಿಯೆತ್ತದಂತೆ ಮಾಡಿ ತುಳಿದಿಟ್ಟಿದೆ. ಸಮಾಜದ ಜನಸಂಖ್ಯೆಯ ಅರ್ಧಭಾಗದಷ್ಟಿರುವ ಹೆಣ್ಣಿನ ಇಂದಿನ ದುಃಸ್ಥಿತಿಗೆ ಒಂದು ಚರಿತ್ರೆಯೇ ಇದೆ. ಇತಿಹಾಸದಲ್ಲಿ ಅವಳ ಸ್ಥಾನಮಾನಗಳಿಗೆ ಕಾರಣವಾದ ಅಂದಿನ ಸಾಮಾಜಿಕ ಶಕ್ತಿಗಳ ಮತ್ತು ಅವುಗಳ ಬದಲಾವಣೆಯಿಂದ ಆದ ಪರಿಣಾಮ, ಹೆಣ್ಣಿನ ಸಮಸ್ಯೆಗಳ ಉಗಮ ಮತ್ತು ಅವುಗಳ ವಿವಿಧ ಸ್ವರೂಪದ ಅಧ್ಯಯನ ಈ ಸಮಸ್ಯೆಗಳಿಗೆ ಕಾರಣವಾದ ಶಕ್ತಿಗಳನ್ನು ಗುರುತಿಸಿ ಅವುಗಳ ವಿರುದ್ಧ ಹೋರಾಡಲು ಬೇಕಾದ ಸೈದ್ಧಾಂತಿಕ ತಳಹದಿಯ ಅನ್ವೇಷಣೆ ಇವೆಲ್ಲವೂ 30 ವರ್ಷಗಳಿಂದ ನಡೆಯುತ್ತಿರುವ ಮಹಿಳಾ ಚಳವಳಿಯಿಂದ ಆಗುತ್ತಿರುವ ನಿರಂತರ ಪ್ರಯತ್ನದ ಪರಿಣಾಮಗಳು.

ಕೃಷ್ಣನಿಗೆ ಮೊರೆಯಿಟ್ಟ ದ್ರೌಪದಿಯಂತೆ, ರಾಮನಿಗೆ ಕಾಯುತ್ತಿದ್ದ ಅಹಲ್ಯೆಯಂತೆ ಇಂದು ಹೆಣ್ಣು ಯಾವ ಯುಗ ಪ್ರವರ್ತಕನಿಗೂ ಮೊರೆಯಿಡುವುದರಿಂದ ಪ್ರಯೋಜನವಿಲ್ಲ. ತನ್ನ ವಿಮೋಚನೆ ತನ್ನ ಕೈಯಲ್ಲೇ ಇದೆ ಎಂದು ಮನಗಂಡು ಸಂಘಟಿತ 'ಸ್ತ್ರೀ ಶಕ್ತಿ'ಯನ್ನು ಸೇರಿಕೊಳ್ಳಬೇಕಾಗಿದೆ.

- ಜಯಶ್ರೀ

## ಸ್ಫೂರ್ತಿ

ನಾ ಕವಿಯತ್ರಿಯಾಗಿದ್ದರೆ
ನಿನ್ನ ಮೇಲಿನ ಪ್ರೀತಿಯ ವರ್ಣಿಸುತ್ತಿದ್ದೆ
ನಾ ಚಿತ್ರಲೇಖಕಿಯಾಗಿದ್ದರೆ
ನಿನ್ನ ಪ್ರತಿರೂಪವನ್ನೇ ಬಿಡಿಸಿ ಬಿಡುತ್ತಿದ್ದೆ
ನಾ ಹಾಡುಗಾರ್ತಿಯಾಗಿದ್ದರೆ
ನಿನ್ನ ಬಗ್ಗೆಯೇ ಪದ ಕಟ್ಟುತ್ತಿದ್ದೆ
ನಾ ಕನಸುಗಾರ್ತಿಯಾಗಿದ್ದರೆ
ಸದಾ ನಿನ್ನ ಕಾಣಲೆಂದೆ ನಿದ್ದೆ ಮಾಡಿಬಿಡುತ್ತಿದ್ದೆ
ಆದರೆ ನಾನು ಮೇಲಿನವುಗಳಲ್ಲಿ
ಯಾವುದೂ ಆಗುವುದಿಲ್ಲ
ಕಾರಣ ನಿನ್ನ ಪ್ರೀತಿಯ ಸ್ಫೂರ್ತಿ
ನನಗೆ ಸಿಕ್ಕಿಲ್ಲ.

- ಎಂ. ರಾವ್

ಶ್ರೀ ಮಲ್ಲಿಕಾರ್ಜುನ ಖರ್ಗೆ, ಮಾನ್ಯ ಗೃಹ ಸಚಿವರು, ಕರ್ನಾಟಕ ಸರ್ಕಾರ ಇವರಿಗೆ,

ಉಪತಹಸೀಲ್ದಾರರು, ಕುಶಾಲನಗರ ನಾಡು ಕಛೇರಿ, ಸೋಮವಾರಪೇಟೆ ತಾಲ್ಲೋಕು ಇವರ ಮೂಲಕ.

ಮಾನ್ಯರೇ,

ವಿಷಯ : ಕೊಡಗು ಜಿಲ್ಲೆಯಾದ್ಯಂತ ಮಹಿಳೆಯರ ಮೇಲಿನ ದೌರ್ಜನ್ಯಗಳನ್ನು ತಡೆಗಟ್ಟುವುದು. ಕುಶಾಲನಗರದಲ್ಲಿ ವರದಕ್ಷಿಣೆ ಪ್ರಕರಣಕ್ಕೆ ಸಂಬಂಧಿಸಿದಂತೆ ದಾರುಣವಾಗಿ ಹತ್ಯೆಗೀಡಾದ ದಲಿತ ಯುವತಿ ಪ್ರಮೀಳ ಪ್ರಕರಣದ ತನಿಖೆಯನ್ನು ಶೀಘ್ರವಾಗಿ ನಡೆಸಿ ಅಪರಾಧಿಗಳಿಗೆ ಶಿಕ್ಷೆ ವಿಧಿಸಲು ಆಗ್ರಹಿಸಿ ಸಾಮೂಹಿಕ ಮನವಿ.

ಕಳೆದ ಕೆಲವು ವರ್ಷಗಳಿಂದ ಕೊಡಗು ಜಿಲ್ಲೆಯ ವಿವಿಧ ಭಾಗಗಳಲ್ಲಿ ಮಹಿಳೆಯರ ಮೇಲಿನ ದೌರ್ಜನ್ಯಗಳು ಅವ್ಯಾಹತವಾಗಿ ನಡೆಯುತ್ತಲೇ ಇದೆ. ಗ್ರಾಮಾಂತರ ಪ್ರದೇಶದಲ್ಲಿನ ಅನಕ್ಷರತೆ ಹಾಗೂ ಕಾನೂನಿನ ಬಗೆಗೆ ಇರುವಂತಹ ಅರಿವಿನ ಕೊರತೆಯಿಂದ ಹಲವಾರು ಮಹಿಳಾ ದೌರ್ಜನ್ಯದ ಪ್ರಕರಣಗಳು ಬೆಳಕಿಗೆ ಬರುತ್ತಿಲ್ಲ. ಆದುದರಿಂದ ಇನ್ನು ಮುಂದೆ ಜಿಲ್ಲೆಯ ಮಹಿಳಾ ದೌರ್ಜನ್ಯದ ಪ್ರಕರಣಗಳನ್ನು ದಾಖಲಿಸಲು ಮತ್ತು ಅದನ್ನು ಸಂಪೂರ್ಣವಾಗಿ ನಿರ್ಮೂಲನ ಮಾಡಲು ಸರ್ಕಾರದ ಸಂಬಂಧಪಟ್ಟ ಇಲಾಖೆ ಗಮನಹರಿಸಬೇಕಾಗಿದೆ. ಮಹಿಳೆಯರ ಮೇಲಿನ ದೌರ್ಜನ್ಯವನ್ನು ತಡೆಗಟ್ಟುವ ಕಾನೂನುಗಳನ್ನು ಸರಿಯಾಗಿ ಅನುಷ್ಠಾನಗೊಳಿಸಬೇಕಾಗಿದೆ. ಈ ಬಗ್ಗೆ ಸರ್ಕಾರದಿಂದ ಪ್ರತ್ಯೇಕವಾಗಿ ಒದಗಿಸಿರುವ ಸೌಕರ್ಯಗಳು (ಉದಾ: ಮಹಿಳಾ ಪೊಲೀಸ್ ಸೇವೆ ಮಹಿಳೆಯರ ಪ್ರತ್ಯೇಕ ವಿಚಾರಣೆ, ಪ್ರತ್ಯೇಕ ಮಹಿಳಾ ಪೊಲೀಸ್ ಠಾಣೆ ಇತ್ಯಾದಿ) ಜಿಲ್ಲೆಯ ಎಲ್ಲಾ ಮಹಿಳೆಯರಿಗೂ ಲಭಿಸುವಂತಾಗಬೇಕು. ಮಾರ್ಚ್ 7ರಂದು ಸೋಮವಾರಪೇಟೆ ತಾಲ್ಲೋಕಿನ ಕುಶಾಲನಗರದ ಮಾದಾಪಟ್ಟಣದಲ್ಲಿ ವರದಕ್ಷಿಣೆ ಪ್ರಕರಣಕ್ಕೆ ಸಂಬಂಧಿಸಿದಂತೆ ಬರ್ಬರವಾಗಿ ಹತ್ಯೆಗೀಡಾದ ದಲಿತ ಮಹಿಳೆ ಪ್ರಮೀಳ (20 ವರ್ಷ) ಪ್ರಕರಣದ ಆರೋಪಿಗಳಿಗೆ ಶಿಕ್ಷೆ ವಿಧಿಸಿ ಇನ್ನು ಮುಂದೆ ಜಿಲ್ಲೆಯಲ್ಲಿ ಇಂತಹ ಘಟನೆಗಳು ಮರುಕಳಿಸದಂತೆ ಜಿಲ್ಲಾಡಳಿತದ ವತಿಯಿಂದ ಸೂಕ್ತ ಕ್ರಮ ಕೈಗೊಳ್ಳಲು ಆಗ್ರಹಿಸಿ ಕುಶಾಲನಗರದ ಜಾಗೃತ ಮಹಿಳಾ ವೇದಿಕೆ ಸಾಮೂಹಿಕ ಮನವಿ ನೀಡಿ ಪ್ರದರ್ಶನ ನಡೆಸಿ ಈ ಮೂಲಕ ಒತ್ತಾಯಿಸುತ್ತಿದೆ.

**ಜಾಗೃತ ಮಹಿಳಾ ವೇದಿಕೆಯ ಪ್ರಮುಖ ಬೇಡಿಕೆಗಳು :**

ಮಹಿಳೆಯರ ಮೇಲಿನ ದೌರ್ಜನ್ಯಗಳನ್ನು ತಡೆಗಟ್ಟಲು ಕುಶಾಲನಗರ ಜಾಗೃತ ಮಹಿಳಾ ವೇದಿಕೆಯು ಪ್ರಮುಖವಾಗಿ ಕೆಲವು ಬೇಡಿಕೆಗಳನ್ನು ಮುಂದಿಡುತ್ತಿದೆ.

(1) ಮಾರ್ಚ್ 7 (2000)ರಂದು ಕೊಡಗು ಜಿಲ್ಲೆಯ, ಸೋಮವಾರಪೇಟೆ ತಾಲ್ಲೂಕಿನ ಕುಶಾಲನಗರದ ಮಾದಾಪಟ್ಟಣದ ಬಳಿ ದಲಿತ ಮಹಿಳೆ ಪ್ರಮೀಳ (20 ವರ್ಷ) ವಿವಾಹವಾದ ಮೂರೇ ತಿಂಗಳೊಳಗೆ ತನ್ನ ಗಂಡ, ಅತ್ತೆ, ಮಾವ, ಮೈದುನ ಸೇರಿ ಕಿರುಕುಳ ನೀಡಿ ಬರ್ಬರವಾಗಿ ಕೊಲೆ ಮಾಡಿದ ಪ್ರಕರಣದ ಸಮಗ್ರ ತನಿಖೆ ನಡೆಸಿ, ಅಪರಾಧಿಗಳಿಗೆ ಶೀಘ್ರವಾಗಿ ಶಿಕ್ಷೆ ವಿಧಿಸಲು ಸಂಬಂಧಪಟ್ಟ ಇಲಾಖೆಯನ್ನು ಈ ಮೂಲಕ ಆಗ್ರಹಿಸುತ್ತಿದ್ದೇವೆ. ಮತ್ತು ಆರೋಪ ಪಟ್ಟಿಯನ್ನು ಶೀಘ್ರವಾಗಿ ಸಲ್ಲಿಸಲು ಈ ಮೂಲಕ ಆಗ್ರಹಿಸುತ್ತಿದ್ದೇವೆ.

(2) ಕೊಡಗು ಜಿಲ್ಲೆಯ, ಕುಶಾಲನಗರ, ವೀರಾಜಪೇಟೆ, ಮಡಿಕೇರಿಗಳಲ್ಲಿ ಮಹಿಳಾ ಪೊಲೀಸ್ ಠಾಣೆಗಳನ್ನು ತೆರೆದು ಮಹಿಳಾ ದೌರ್ಜನ್ಯ, ವರದಕ್ಷಿಣೆ ಪ್ರಕರಣಗಳು ಹಾಗೂ ಮಹಿಳೆಯರ ಮೇಲಿನ ಕಿರುಕುಳಗಳನ್ನು ಸಂಪೂರ್ಣವಾಗಿ ತಡೆಗಟ್ಟಲು ಸೂಕ್ತ ಕ್ರಮಕ್ಕಾಗಿ ಆಗ್ರಹ.

(3) ಕೊಡಗು ಜಿಲ್ಲೆಯಲ್ಲಿ ಬೆಳಕಿಗೆ ಬಾರದಿರುವ ಮಹಿಳಾ ದೌರ್ಜನ್ಯ ಹಾಗೂ ಕಿರುಕುಳದ ಪ್ರಕರಣಗಳನ್ನು ತಡೆಗಟ್ಟಲು ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿಯವ ನೇತೃತ್ವದಲ್ಲಿ ನಿಯತವಾಗಿ ಸಭೆ ನಡೆಸುವುದು. ಈ ಸಭೆಯಲ್ಲಿ ಮಹಿಳಾ ದೌರ್ಜನ್ಯ ಪ್ರಕರಣಗಳನ್ನು ಅವಲೋಕಿಸುವುದು : ಮತ್ತು ತಡೆಗಟ್ಟಲು ಸೂಕ್ತ ಕ್ರಮಗಳನ್ನು ಅನುಷ್ಠಾನಗೊಳಿಸುವುದು. ಈ ಸಭೆಗಳ ಸದಸ್ಯರಾಗಿ ವಿವಿಧ ಮಹಿಳಾ ಸಂಘಗಳ ಪ್ರತಿನಿಧಿಗಳನ್ನು ಆಹ್ವಾನಿಸಿ : ಅವರ ಸಲಹೆ ಸೂಚನೆಗಳನ್ನು ಸ್ವೀಕರಿಸಲು ಈ ಮೂಲಕ ಆಗ್ರಹಿಸುತ್ತಿದ್ದೇವೆ.

(4) ಕೊಡಗು ಜಿಲ್ಲೆಯ ಎಲ್ಲಾ ಪೊಲೀಸ್ ಠಾಣೆಗಳಲ್ಲಿ ಮಹಿಳೆಯರ ಪ್ರಕರಣಗಳನ್ನು ಹಾಗೂ ಅಹವಾಲುಗಳನ್ನು ಸ್ವೀಕರಿಸಲು ಮಹಿಳಾ ಮುಖ್ಯ ಪೇದೆಗಳನ್ನು ನೇಮಿಸಲು ಮತ್ತು ಮಹಿಳಾ ದೌರ್ಜನ್ಯದ ಪ್ರಕರಣಗಳನ್ನು ನ್ಯಾಯೋಚಿತವಾಗಿ ಬಗೆಹರಿಸಲು ಮಹಿಳಾ ಅಧಿಕಾರಿಗಳಿಗೆ ಹೆಚ್ಚಿನ ಅಧಿಕಾರ ನೀಡಬೇಕಾಗಿ ಈ ಮೂಲಕ ಒತ್ತಾಯಿಸುತ್ತಿದ್ದೇವೆ.

(5) ಇದರೊಂದಿಗೆ ಕಳೆದ 15 ದಿನಗಳ ಹಿಂದೆ ಕೊಡಿಗೆಯ ಬಳಿ ಭಾಗ್ಯಮ್ಮ ಎಂಬ ಮಹಿಳೆಯ ಮೇಲೆ ಸಾಮೂಹಿಕವಾಗಿ ದೌರ್ಜನ್ಯ ನಡೆಸಿ, ಆಸ್ತಿಪಾಸ್ತಿಗೆ ಹಾನಿ ಮಾಡಿದವರ ವಿರುದ್ಧ ತನಿಖೆ ನಡೆಸಿ ಸೂಕ್ತ ಕ್ರಮ ಕೈಗೊಳ್ಳಲು ಹಾಗೂ ಕಳೆದ ಒಂದು ವರುಷದ ಹಿಂದೆ ಕುಶಾಲನಗರದ ಬಳಿ ಸುಂದರ ನಗರದಲ್ಲಿ ಯುವತಿಯೋರ್ವಳನ್ನು ಮದುವೆಯಾಗುವುದಾಗಿ ನಂಬಿಸಿ, ವಂಚಿಸಿದ ಪ್ರಕರಣದ ಆರೋಪಿಯನ್ನು ಕೂಡಲೇ ಬಂಧಿಸಿ, ತನಿಖೆಯನ್ನು ಶೀಘ್ರಗೊಳಿಸುವ ಬಗ್ಗೆ ಈ ಮೂಲಕ ಆಗ್ರಹಿಸುತ್ತಿದ್ದೇವೆ.

## ಕೇಳಿಸದೇ ನಿಮಗೂ

ಬಣ್ಣಗೆಟ್ಟ ಇರುಳುಗಳ ನಡುನಡುವೆ
ಹೊರಳಿ ನರಳಿವೆ ವಿರಹದುರಿಯದಳ್ಳುರಿ
ಎಲ್ಲಿ ಹೋದವಲ್ಲಿ ಮುಗಿಲುಗಳ ಪಡೆ
ಸುರಿಸದೆ ಒಂದಿಷ್ಟು, ತಣ್ಣನೆಹುಗಳ
ಬಾಯಾರಿವೆ ತೊನೆಯುವ ಬಯಕೆಗೆ
ಚೆಲ್ಲಾಟದಲಿ ಮೂಕಸಂಕಟ
ಸಿರ್ರನೆದ್ದು ತಿರುಗುವ ಬಿರುಗಾಳಿ
ಸುಳಿಸುತ್ತಿ ಹಿಂಡುವ ಕಬಂಧಬಾಹುಗಳ
ಸೆಣಸಾಟದಲಿ ಬಳಲಿಕೆ, ಬಿಕ್ಕಳಿಕೆ
ಅನುದಿನವೂ ನವತಾರುಣ್ಯದ ಮೀಸಲು
ಮುರಿವ ಮೃಷ್ಟಾನ್ನವಿರುವಾಗ
ಉಂಡೆಸೆದ ಬಾಳೆಲೆಯ ನೆನಪೇ ಬರೀ ಕನಸು
ಕಣ್ಕಟ್ಟು ಬಿಗಿದು ಬಯಲೊಳಗೆ
ಓಡುವಾಗ ಮುಗ್ಗರಿಕೆ, ಬೆನ್ನ ಸವಾರಿ
ಕಾಣದ ಹಾದಿ ಮುಳ್ಳಿನ ಬೇಲಿ
ಕಾಲ್ತೊಡಕು, ಬೊಗತೆ ತುಂಬ ನೆತ್ತರು
ದಿಕ್ಕು ತಪ್ಪಿದ ಮೋಡದ ಹಿಂಡು
ತಂಪನೀಯಲಿಲ್ಲ ಧರೆಗೆ
ಬೇಗುದಿ, ತಾಪ, ನಿಟ್ಟುಸಿರು
ಲೆಕ್ಕವಿಡದ ಬಿಸಿಯುಸಿರು
ಅರಮನೆಯಾತ ಸೆರೆಯಾಳಿನಂತೆ,
ಕಾಚಿದೆ ಗಪ್ಪನೆ ಕತ್ತಲೆ ಬೆಂಕಿಗೆ
ಸುಟ್ಟು ಕರಕಾದ ಭಾವನೆಗಳ
ಬೂದಿ ಬಂಗಾರದ ಕರಂಡಿಕೆಯೊಳಗೆ.

*- ಎನ್. ಶೈಲಜಾ ಹಾಸನ್*

ಮಾನಸ ಪತ್ರಿಕೆ ಯಾವ ಸಂಸ್ಥೆಯ, ಸರ್ಕಾರದ ನೆರವಿಲ್ಲದೇ ಪ್ರಕಟವಾಗುತ್ತಿರುವ ಮಹಿಳೆಯರೇ ನಡೆಸುತ್ತಿರುವ ಸ್ವಾಯತ್ತ ಪತ್ರಿಕೆ. ಓದುಗರು ಹಾಗೂ ಸಹೃದಯರು ನೀಡುವ ಆರ್ಥಿಕ ನೆರವೇ ಪತ್ರಿಕೆಯ ಜೀವಾಳ. ಚಂದಾದಾರರಿಗೆ ಚಂದಾ ಅವಧಿ ಮುಕ್ತಾಯವಾದುದರ ಬಗ್ಗೆ ಸೂಚನೆಯನ್ನು ನೀಡಲಾಗುತ್ತದೆ. ಓದುಗರು ತಕ್ಷಣ ಚಂದಾ ನವೀಕರಿಸಬೇಕೆಂದು ಕೋರುತ್ತೇವೆ. ಪತ್ರಿಕೆಯು ಉಳಿದು ಬೆಳೆಯಬೇಕಾದರೆ ಓದುಗರ ಸಹಕಾರ ಅತ್ಯಗತ್ಯ.

**ವಾರ್ಷಿಕ ಚಂದಾ : 40 ರೂ.**

**ಸಂಸ್ಥೆಗಳಿಗೆ : 100 ರೂ.**

*ಸಂ. ಮಂಡಳಿ*

REGD No. CPMG/KA/BGE/289/2000

BOOK-POST
PRINTED MATTER

ವಿಳಾಸ :
**ಮಾನಸ**
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು - 560 067